KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಡಿಸೆಂಬರ್ ೧೩, ೨೦೦೭ (ಮಾರ್ಗಶಿರ ೨೨, ಶಕ ವರ್ಷ ೧೯೨೯) | ಸಂಚಿಕೆ ೪೯ |
| --- | --- | --- |

## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಲೋಕ ಸೇವಾ ಆಯೋಗ**
**'ಉದ್ಯೋಗ ಸೌಧ', ಬೆಂಗಳೂರು–560 001**
**ಸಂಖ್ಯೆ: ಇ(3) 230/2007–08/ಪಿಎಸ್‌ಸಿ, ದಿನಾಂಕ: 05ನೇ ಡಿಸೆಂಬರ್ 2007**
**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 18–01–2008**

**ಅಧಿಸೂಚನೆ**

1. ಕರ್ನಾಟಕ ಸರ್ಕಾರದ ವಿವಿಧ ಇಲಾಖೆಗಳಲ್ಲಿರುವ ಸಹಾಯಕರ / ಪ್ರಥಮ ದರ್ಜೆ ಸಹಾಯಕರ ಮತ್ತು ಕಿರಿಯ ಸಹಾಯಕರ / ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ಕರ್ನಾಟಕ ನಾಗರೀಕ ಸೇವೆಗಳ (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978ರ ಮತ್ತು ತಿದ್ದುಪಡಿ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 90 ಎಸ್‌ಸಿಆರ್ 85, ದಿನಾಂಕ: 27.02.1992ರ ಅನ್ವಯ ನೇಮಕಾತಿಯನ್ನು ಮಾಡಲು ಅರ್ಹ ಅಭ್ಯರ್ಥಿಗಳಿಂದ ಆಯೋಗವು ನಿಗದಿಪಡಿಸಿರುವ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದೆ. ಈ ನೇಮಕಾತಿಯಲ್ಲಿ ಅಭ್ಯರ್ಥಿಗಳ ಆಯ್ಕೆಯನ್ನು ಆಯೋಗವು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅವರು ಗಳಿಸುವ ಅಂಕಗಳ ಅರ್ಹತಾನುಸಾರ ಮತ್ತು ಚಾಲ್ತಿಯಲ್ಲಿರುವ ಮೀಸಲಾತಿಯನ್ವಯ ಮಾಡಲಾಗುವುದು. ಈ ಸ್ಪರ್ಧಾತ್ಮಕ ಪರೀಕ್ಷೆಯನ್ನು 2008ರ ಜೂನ್ ತಿಂಗಳ ಒಂದು ಭಾನುವಾರ ನಡೆಸಲಾಗುವುದು. ಪರೀಕ್ಷೆಯ ವೇಳಾಪಟ್ಟಿ ಮತ್ತು ಪರೀಕ್ಷಾ ಕೇಂದ್ರದ ವಿವರವನ್ನು ಅಭ್ಯರ್ಥಿಗಳಿಗೆ ನೀಡುವ ಪ್ರವೇಶ ಪತ್ರದಲ್ಲಿ ನಮೂದಿಸಲಾಗುವುದು. ಹೆಚ್ಚಿನ ಮಾಹಿತಿಗಾಗಿ ಆಯೋಗದ ವೆಬ್‌ಸೈಟ್ http://kpsc.kar.nic.in ಅನ್ನು ನೋಡಬಹುದು.
2. ವಿವಿಧ ನೇಮಕಾತಿ ಪ್ರಾಧಿಕಾರಿಗಳಲ್ಲಿ ಖಾಲಿ ಇರುವ ಸಹಾಯಕ / ಪ್ರಥಮ ದರ್ಜೆ ಸಹಾಯಕ ಹುದ್ದೆಗಳ ವಿವರಗಳನ್ನು ಅನುಬಂಧ–4ರಲ್ಲಿ, ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ವಿವರಗಳನ್ನು ಅನುಬಂಧ–5ರಲ್ಲಿ ಮತ್ತು ತೋರಿಸಲಾಗಿದೆ. ಅದರಲ್ಲಿ ತೋರಿಸಲಾಗಿರುವ ಹುದ್ದೆಗಳ ಸಂಖ್ಯೆ ಬದಲಾವಣೆಗೆ ಒಳಪಟ್ಟಿರುತ್ತದೆ. ಅಂತಿಮವಾಗಿ ಆಯ್ಕೆಗೆ ಪರಿಗಣಿಸುವ ಇಲಾಖಾವಾರು ಹುದ್ದೆಗಳ ವರ್ಗೀಕರಣವನ್ನು ಆಯ್ಕೆ ಹಂತಕ್ಕೆ ಬರುವ ಅಭ್ಯರ್ಥಿಗಳಿಗೆ ಒದಗಿಸಲಾಗುವುದು.
3. ಪರೀಕ್ಷೆಯನ್ನು ಎಲ್ಲಾ ಜಿಲ್ಲಾ ಮತ್ತು ಕೆಲವು ಆಯ್ದ ತಾಲ್ಲೂಕು ಕೇಂದ್ರಗಳಲ್ಲಿ ಮಾತ್ರ ನಡೆಸಲು ಉದ್ದೇಶಿಸಲಾಗಿದ್ದು, ಅಭ್ಯರ್ಥಿಗಳು ಇವುಗಳಲ್ಲಿ ಯಾವುದಾದರು ಒಂದನ್ನು ಮಾತ್ರ ಪರೀಕ್ಷಾ ಕೇಂದ್ರವನ್ನಾಗಿ ಆಯ್ದುಕೊಳ್ಳತಕ್ಕದ್ದು. ಪರೀಕ್ಷಾ ಕೇಂದ್ರಗಳ ಹೆಸರು ಮತ್ತು ಅವುಗಳ ಕೋಡ್ ಸಂಖ್ಯೆಗಳನ್ನು ಅನುಬಂಧ–1 ರಲ್ಲಿ ನೀಡಲಾಗಿದೆ. ಅಭ್ಯರ್ಥಿಯು ಆಯ್ದುಕೊಳ್ಳುವ ಕೇಂದ್ರದ ಹೆಸರು ಮತ್ತು ಕೋಡ್ ಸಂಖ್ಯೆಗಳನ್ನು ಅರ್ಜಿ ನಿಗದಿತ ಅಂಕಣದಲ್ಲಿ ಸ್ಪಷ್ಟವಾಗಿ ನಮೂದಿಸತಕ್ಕದ್ದು. ಪರೀಕ್ಷಾ ಕೇಂದ್ರಗಳ ಹಂಚಿಕೆ ಹಾಗೂ ಪರೀಕ್ಷಾ ದಿನಾಂಕವು ಆಯೋಗದ ಅಂತಿಮ ತೀರ್ಮಾನದಂತೆ ಬದಲಾವಣೆಗೆ ಒಳಪಟ್ಟಿರುತ್ತದೆ. ಆಯೋಗವು ಅಭ್ಯರ್ಥಿಗೆ ಹತ್ತಿರದ ಬೇರೆ ಕೇಂದ್ರವನ್ನು

ಸೂಚಿಸಬಹುದು ಅಥವಾ ಪರಿಸ್ಥಿತಿಗನುಗುಣವಾಗಿ ಹೊಸ ಕೇಂದ್ರವನ್ನು ಹಂಚಿಕೆ ಮಾಡಬಹುದು. ಈ ವಿಷಯದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ.

4. ನಿಗದಿಪಡಿಸಿದ ರೂ. 50/– ರ ಅರ್ಜಿ ಶುಲ್ಕವನ್ನು ನಗದು ರೂಪದಲ್ಲಿ ಪಾವತಿಸಿ ಅನುಬಂಧ–6ರಲ್ಲಿನ ಪಟ್ಟಿಯಲ್ಲಿ ನಮೂದಿಸಿರುವ ಯಾವುದಾದರೊಂದು ಅಂಚೆ ಕಛೇರಿಯಲ್ಲಿ ದಿನಾಂಕ:14–12–2007 ರಿಂದ ಪಡೆಯಬಹುದು.

ಅರ್ಜಿ ಶುಲ್ಕ ರೂ.50/–ಅನ್ನು ನಗದಾಗಿ ಪಾವತಿಸಿ ಅರ್ಜಿಗಳನ್ನು **ಆಯೋಗದ ಕೇಂದ್ರ ಕಛೇರಿ ಮತ್ತು ಪ್ರಾಂತೀಯ ಕಛೇರಿಗಳಲ್ಲಿಯೂ (ಮೈಸೂರು, ಬೆಳಗಾವಿ ಗುಲ್ಬರ್ಗಾ) ದಿನಾಂಕ:14–12–2007 ರಿಂದ ಪಡೆಯಬಹುದು.**

**5. <u>ಪರೀಕ್ಷಾ ಶುಲ್ಕ :</u>**

| ಅಭ್ಯರ್ಥಿಗಳು | ಸಹಾಯಕ / ಪ್ರಥಮ ದರ್ಜೆ ಸಹಾಯಕ ಹುದ್ದೆಗೆ | ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ |
|---|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ. ಪಂಗಡ ಪ್ರವರ್ಗ–1, ಹಾಗೂ ಮಾಜಿ ಸೈನಿಕರು | ರೂ. 100/– | ರೂ. 100/– |
| ಇತರೆ | ರೂ. 300/– | ರೂ. 200/– |

ಭರ್ತಿ ಮಾಡಿದ ಅರ್ಜಿಗಳನ್ನು ಹಾಗೂ ನಿಗದಿಪಡಿಸಿದ ಪರೀಕ್ಷಾ ಶುಲ್ಕವನ್ನು ನಗದು ರೂಪದಲ್ಲಿ ಮೇಲೆ ಹೇಳಿದ ಯಾವುದಾದರೊಂದು ಅಂಚೆ ಕಛೇರಿಯಲ್ಲಿ ಸಲ್ಲಿಸಬಹುದು.

**ಪರೀಕ್ಷಾ ಶುಲ್ಕವನ್ನು ನಗದಾಗಿ ಪಾವತಿಸುವ ಮೂಲಕ ಭರ್ತಿಮಾಡಿದ ಅರ್ಜಿಯನ್ನು ಆಯೋಗದ ಕೇಂದ್ರ/ಪ್ರಾಂತೀಯ ಕಛೇರಿಗಳಲ್ಲಿಯೂ ಖುದ್ದಾಗಿ ದಿನಾಂಕ:18–01–2008 ರೊಳಗೆ ಸಲ್ಲಿಸತಕ್ಕದ್ದು.**

ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

**ಅರ್ಜಿಗಳನ್ನು ಅಂಚೆ / ಕೋರಿಯರ್ ಮೂಲಕ ಆಯೋಗದ ಕೇಂದ್ರ ಅಥವಾ ಪ್ರಾಂತೀಯ ಕಛೇರಿಗಳಿಗೆ ಕಳುಹಿಸಬಾರದು**

ಪ್ರಾಂತೀಯ ಕಛೇರಿಗಳ ವಿಳಾಸ:

| | | |
|---|---|---|
| **ಕರ್ನಾಟಕ ಲೋಕಸೇವಾ ಆಯೋಗ**<br>ಪ್ರಾಂತೀಯ ಕಛೇರಿ<br>ಸಂಖ್ಯೆ: 899, 3ನೇ ಮೇನ್,<br>8ನೇ ಅಡ್ಡರಸ್ತೆ, ಸರಸ್ವತಿಪುರಂ,<br>ಮೈಸೂರು–570009<br>**ದೂರವಾಣಿ ಸಂಖ್ಯೆ:**<br>**(0821–2545956)** | **ಕರ್ನಾಟಕ ಲೋಕಸೇವಾ ಆಯೋಗ**<br>ಪ್ರಾಂತೀಯ ಕಛೇರಿ<br>ಸಿಟಿಎಸ್ ನಂ:6543,<br>ಸೆಕ್ಟರ್ 10, ಮಾಳ ಮಾರುತಿ ಬಡಾವಣೆ,<br>ಆಂಜನೇಯನಗರ,<br>ಬೆಳಗಾವಿ–590016<br>**ದೂರವಾಣಿ ಸಂಖ್ಯೆ:**<br>**(0831–2475345)** | ಕರ್ನಾಟಕ ಲೋಕಸೇವಾ ಆಯೋಗ<br>ಪ್ರಾಂತೀಯ ಕಛೇರಿ<br>**ಸಂಖ್ಯೆ:18/ಬಿ, 3ನೇ ಮಹಡಿ, ವಿಕಾಸ ಭವನ, ಮಿನಿ ವಿಧಾನಸೌಧ,**<br>ಗುಲ್ಬರ್ಗಾ–585102<br>**ದೂರವಾಣಿ ಸಂಖ್ಯೆ:**<br>**(08472–2279440)** |

ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

6. <u>ಅರ್ಹತಾ ಷರತ್ತುಗಳು :</u>

ಅ) ಭಾರತೀಯ ನಾಗರೀಕನಾಗಿರತಕ್ಕದು

ಅ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

7. <u>ಪರೀಕ್ಷಾ ವಿಧಾನ :</u>

ಕರ್ನಾಟಕ ನಾಗರೀಕ ಸೇವೆಗಳು (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978ರ ಮತ್ತು ತಿದ್ದುಪಡಿ ಅಧಿಸೂಚನೆಗಳನ್ವಯ ನಡೆಸುವ ಈ ಪರೀಕ್ಷೆಯು ವಸ್ತುನಿಷ್ಠ ಬಹು ಆಯ್ಕೆ ಮಾದರಿಯ ಪತ್ರಿಕೆಗಳನ್ನು ಹೊಂದಿರುತ್ತದೆ.

**ಪ್ರಶ್ನೆ ಪತ್ರಿಕೆ – 1 : ಸಾಮಾನ್ಯ ಜ್ಞಾನ : 150 ಅಂಕಗಳು – 2 ಘಂಟೆಗಳ ಅವಧಿ**

**ಪ್ರಶ್ನೆ ಪತ್ರಿಕೆ – 2 : ಸಾಮಾನ್ಯ ಕನ್ನಡ ಅಥವಾ ಸಾಮಾನ್ಯ ಇಂಗ್ಲೀಷ್ : 150 ಅಂಕಗಳು – 2 ಘಂಟೆಗಳ ಅವಧಿ**

ಸದರಿ ಹುದ್ದೆಗಳ ನೇಮಕಾತಿಗಾಗಿ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯ ಪಠ್ಯಕ್ರಮವನ್ನು ಅನುಬಂಧ–2 ಮತ್ತು ಅನುಬಂಧ–3 ರಲ್ಲಿ ತೋರಿಸಲಾಗಿದೆ.

8. **ವೇತನ ಶ್ರೇಣಿ :**

| | |
|---|---|
| ಸಹಾಯಕ | ರೂ. 8000–200–8600–225–9500–250–10500–300–12300–350–14400–400–14800 |
| ಪ್ರಥಮ ದರ್ಜೆ ಸಹಾಯಕ | ರೂ. 7275–175–7800–200–8600–225–9500–250–10500–300–12300–350–13350 |
| ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕ | ರೂ. 5800–100–6000–125–6500–150–7100–175–7800–200–8600–225–9500–250–10500 |

**ಪಿಂಚಣಿ ಸೌಲಭ್ಯ:** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ: 31.03.2006 ರಂತೆ

9. **ಆಯ್ಕೆ ವಿಧಾನ :**

ಆಯೋಗವು ಕರ್ನಾಟಕ ನಾಗರೀಕ ಸೇವೆಗಳು (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978 ಮತ್ತು ಅದರ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 90 ಎಸ್‌ಸಿಆರ್ 85 ದಿನಾಂಕ: 27.08.1992ರಂತೆ ಆಯೋಗವು ನಡೆಸುವ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಗಳಿಸಿದ ಅಂಕಗಳ ಜೇಷ್ಠತೆ ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಇರುವ ಮೀಸಲಾತಿಯನ್ವಯ ಅಂತಿಮವಾಗಿ ಲಭ್ಯವಾಗುವ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಆಯ್ಕೆ ಪಟ್ಟಿ ತಯಾರಿಸಲಾಗುವುದು.

10. **ಶೈಕ್ಷಣಿಕ ವಿದ್ಯಾರ್ಹತೆ :**

**ಸಹಾಯಕ / ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ:**

ಭಾರತದಲ್ಲಿ ಕಾನೂನು ರೀತ್ಯ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯದ ಪದವಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಅಥವಾ ಸರ್ಕಾರವು ಅಂತಹ ಪರೀಕ್ಷೆಗೆ ಸಮಾನವೆಂದು ಅಂಗೀಕರಿಸಿದ ವಿದ್ಯಾರ್ಹತೆಯನ್ನು ಹೊಂದಿರಬೇಕು.

**ಟಿಪ್ಪಣಿ: ಡಿಪ್ಲೊಮಾ, ಹಿಂದಿ ಸಭಾಗಳಿಂದ ಪಡೆದ ರತ್ನಾ, ವಿಶಾರದ, ಪಂಡಿತ್ ಇತ್ಯಾದಿ ವಿದ್ಯಾರ್ಹತೆಗಳು ಪದವಿಗೆ ಸಮಾನವಾಗುವುದಿಲ್ಲ. ಆದ್ದರಿಂದ ಈ ವಿದ್ಯಾರ್ಹತೆಯ ಅಭ್ಯರ್ಥಿಗಳು ಸದರಿ ಹುದ್ದೆಗೆ ಅರ್ಹರಾಗುವುದಿಲ್ಲ.**

**ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ:**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.

**ಸೂಚನೆ: ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲಿನ ನಿಗದಿತ ವಿದ್ಯಾರ್ಹತೆಯ ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ.**

11. **ವಯೋಮಿತಿ :**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು

ಆ) ಗರಿಷ್ಠ ವಯೋಮಿತಿ :

| | |
|---|---|
| ಸಾಮಾನ್ಯ ವರ್ಗ | 33 ವರ್ಷ |
| 2ಎ,2ಬಿ,3ಎ,3ಬಿ | 36 ವರ್ಷ |
| ಪ.ಜಾ/ಪ.ಪಂ/ಪ್ರ–1 | 38 ವರ್ಷ |

ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ) ಕ್ಯುಮುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಆಯೋಗವು ಪರಿಗಣಿಸುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

**ಈ ಮುಂದಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಈ ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.**

(i) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ii) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ ಐದು ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(iii) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದ್ದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:** (ಎ) ಮಾಜಿ ಸೈನಿಕ ಎಂದರೆ ಸಶಸ್ತ್ರದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಅಂದರೆ ಡಿಫೆನ್ಸ್ ಸೆಕ್ಯುರಿಟಿಕೋರ್, ಜನರಲ್ ರಿಸರ್ವ್ ಇಂಜಿನೀಯರಿಂಗ್ ಫೋರ್ಸ್, ಲೋಕಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು (ಬಿ) ಕೇಂದ್ರ ಸಶಸ್ತ್ರದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಹಿಡಿತಕ್ಕೂ ಮೀರದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇನೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

**(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮ್ಯರ್ಥದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.**

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವ ವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

(iv) ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

(v) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸಮಾಡುತ್ತಿದ್ದರೆ, ಅಥವಾ ಹಿಂದೆಯಿದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು

(vi) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

(vii) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು

(viii) ಅಭ್ಯರ್ಥಿಯು ಜೀತಕಾರ್ಮಿಕ ನಾಗಿದ್ದ ಪಕ್ಷದಲ್ಲಿ 10 ವರ್ಷಗಳು
(ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯು ವಯೋಮಿತಿ ಸಡಿಲಿಕೆ ಪಡೆಯಲು ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ರಿಂದ ಪಡೆದಿಟ್ಟುಕೊಂಡಿರತಕ್ಕದ್ದು).

12. **ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :**

ಜಾತಿ ಮೀಸಲಾತಿ ಕೋರಬಯಸುವ

♦ ಪ.ಜಾ/ಪ.ಪಂ. ಅಭ್ಯರ್ಥಿಗಳು ನಮೂನೆ 'ಡಿ' ರಲ್ಲಿ

♦ ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ

♦ ಪ್ರವರ್ಗ– 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಶೀಲ್ದಾರರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವು, ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು/ಚಾಲ್ತಿಯಲ್ಲಿರಬೇಕು. ನಂತರ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

♦ ಸರ್ಕಾರಿ ಆದೇಶ ಸಂಖ್ಯೆ SWD 225 BCA 2000 Dated: 30.03.2002 ರನ್ವಯ ಪ್ರಸ್ತುತ ನಿಯಮಾವಳಿಗಳ ರೀತ್ಯ ಮೀಸಲಾತಿಗೆ ಸಂಬಂಧಿಸಿದಂತೆ ಚಾಲ್ತಿಯಲ್ಲಿರುವ ಜಾತಿಗಳ ಬಗ್ಗೆ ಮಾಹಿತಿಗಾಗಿ ಸಂಬಂಧಿತ ಅಭ್ಯರ್ಥಿಗಳು ಆಯೋಗದ ವೆಬ್‌ಸೈಟ್‌ನ್ನು ನೋಡಬಹುದಾಗಿದೆ.

13. <u>ಗ್ರಾಮೀಣ ಅಭ್ಯರ್ಥಿ:</u>

➢ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಈ ಪ್ರಮಾಣ ಪತ್ರಗಳು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಸಿಂಧುವಾಗಿದ್ದು, ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

➢ ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ 2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

➢ ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿತ ತಹಶೀಲ್ದಾರ್ ರವರಿಂದ ಪಡೆದಿರತಕ್ಕದ್ದು.

➢ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**ಸೂಚನೆ:** ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2ರಲ್ಲಿಯ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಅದಕ್ಕೆ ಸಂಬಂಧಿತ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು.

14. <u>ಕನ್ನಡ ಮಾಧ್ಯಮ ಅಭ್ಯರ್ಥಿ :</u>

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧ ಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

15. <u>ಅಂಗವಿಕಲ ಅಭ್ಯರ್ಥಿ :</u>

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000, ದಿನಾಂಕ: 03.09.2005 ರಲ್ಲಿ ಅಂಗವಿಕಲರೆಂದು ಗುರುತಿಸಿರುವ ಕ್ರಮ ಸಂಖ್ಯೆ: iii ರಿಂದ vii ರವರೆಗಿನ ನ್ಯೂನ್ಯತೆಯಲ್ಲಿ ಶೇ.40ಕ್ಕೆ ಕಡಿಮೆ ಇಲ್ಲದಂತೆ ಬಳಲುತ್ತಿರುವ ವ್ಯಕ್ತಿಗಳು.

ಅಂಗವಿಕಲರಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ: 19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 115 ಸೆನೆನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ, ಅಂಗವಿಕಲತೆಯ ಬಗ್ಗೆ ಜಿಲ್ಲಾಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲು ಬರುವುದಿಲ್ಲ.

ಈ ಅಂಗವಿಕಲ ಮೀಸಲಾತಿಯಡಿ ಆಯ್ಕೆಹೊಂದುವ ಅಭ್ಯರ್ಥಿಗಳು ಸಹ ಈ ನ್ಯೂನ್ಯತೆಯನ್ನು ಹೊಂದಿದ್ದರೂ ಸದರಿ ಹುದ್ದೆಯ ಕರ್ತವ್ಯ ನಿರ್ವಹಣೆಗೆ ಅಡ್ಡಿ ಉಂಟಾಗದೆಂದು **ತಿಳಿಸುವ ದೈಹಿಕ ಅರ್ಹತೆಯ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಸೇರುವ ಮುನ್ನ ನೀಡಬೇಕಾಗುತ್ತದೆ.**

(ಅಂಧತ್ವ ಹಾಗೂ ಕಡಿಮೆ ದೃಷ್ಟಿ ಹೊಂದಿರುವ ಕಾರಣದ ಮೇರೆಗೆ ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ಈ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಲ್ಲ)

16. <u>ಯೋಜನಾ ನಿರಾಶ್ರಿತ ಅಭ್ಯರ್ಥಿ :</u>

ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿರಬೇಕು.

ಈ ಮೇಲೆ ನಮೂದಿಸಿರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳು ಮಾಹಿತಿ ಪುಸ್ತಕದಲ್ಲಿ ನೋಡತಕ್ಕದ್ದು.

17. **ಅಭ್ಯರ್ಥಿಗಳು ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಬಾರದು.** ಆದರೆ ಈ ಕೆಳಕಂಡ ಪ್ರಮಾಣ ಪತ್ರಗಳನ್ನು/ದಾಖಲಾತಿಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಇಲ್ಲವೇ ಸಿಂಧುವಾಗಿರಬೇಕು ಹಾಗೂ ಆಯೋಗವು ಪರಿಶೀಲನೆಗಾಗಿ ಹಾಜರುಪಡಿಸಲು ಸೂಚಿಸಿದಾಗ ಸಂಬಂಧಪಟ್ಟ ಪ್ರಮಾಣ ಪತ್ರಗಳ ಮೂಲ ಪತ್ರಗಳನ್ನು ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗುವುದು.

1) **ಕಡ್ಡಾಯವಾಗಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ : ಅಭ್ಯರ್ಥಿಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.**

2) **ವಿವಿಧ ಮೀಸಲಾತಿ ಕೋರಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ: ಆ ಮೀಸಲಾತಿಯನ್ನು ರದ್ದು ಪಡಿಸಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು.**

**ಕಡ್ಡಾಯವಾಗಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು:**

1. ಸಹಾಯಕ / ಪ್ರಥಮ ದರ್ಜೆ ಸಹಾಯಕ ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಪದವಿಯ ಪ್ರಮಾಣ ಪತ್ರಗಳು.
2. ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿಗಳು.
3. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ (ಟಿ.ಸಿ)/ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ (Extract of Cumulative Record)

**ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು:**

1. ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ

   **ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಅ ಮೀಸಲಾತಿಗೆ ಅರ್ಹರೆ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.
2. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರವರಿಂದ ಪಡೆದಿರುವ ಪ್ರಮಾಣ ಪತ್ರ.
3. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು (Circle) ತುಂಬತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣ ಪ್ರಮಾಣ ಪತ್ರವನ್ನು ('No Objection' Certificate) ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರಬೇಕು
4. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ
5. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ
6. ಅಂಗವಿಕಲ ಅಭ್ಯರ್ಥಿಗಳು ನಿಗದಿಪಡಿಸಿದ ನಮೂನೆಯಲ್ಲಿ ಪಡೆದ ವೈದ್ಯಕೀಯ ಪ್ರಮಾಣ ಪತ್ರ.
7. ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತ ಕಾರ್ಮಿಕರು, ಗ್ರಾಮ ಸಮೂಹ ಪರಿಶೀಲಕರು ಮತ್ತು ಕ್ಯಾಡೆಟ್ ಪರಿವೀಕ್ಷಕರು ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣಪತ್ರ.

   ಈ ಮೇಲಿನ ಅರ್ಹತೆ, ಮೀಸಲಾತಿ ಇತ್ಯಾದಿಗಳನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿದ ನಂತರವೇ ಅಭ್ಯರ್ಥಿಗಳನ್ನು ಜೇಷ್ಠತೆ ಮತ್ತು ಮೀಸಲಾತಿ ಆಧಾರದ ಮೇಲೆ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸಲಾಗುವುದು.

18. **ಅರ್ಜಿ ಭರ್ತಿ ಮಾಡುವುದಕ್ಕೆ ಸಂಬಂಧಿಸಿದ ಸೂಚನೆಗಳು:**

1. ಆಯೋಗವು ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಅಭ್ಯರ್ಥಿಗಳು ಸ್ವಂತ ಕೈಬರಹದಿಂದ ದುಂಡಗೆ ಎಲ್ಲಾ ಅಂಕಣಗಳನ್ನು ಸ್ಪಷ್ಟವಾಗಿ ಭರ್ತಿ ಮಾಡತಕ್ಕದ್ದು.
2. ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಹೆಸರು, ತಾಯಿ/ತಂದೆಯ ಹೆಸರು, ವಿಳಾಸ ಇತ್ಯಾದಿ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷ್‌ನಲ್ಲಿ ಬಿಡಿ ಬಿಡಿಯಾಗಿ ದಪ್ಪ ಅಕ್ಷರಗಳಲ್ಲಿ (Capital Letters) ಬರೆಯಬೇಕು.
3. ಅಭ್ಯರ್ಥಿಗಳು ವಿವರವನ್ನು ಸಂಪೂರ್ಣವಾಗಿ ಅರ್ಜಿಯ ಅಂಕಣದ (Box) ಒಳಗಡೆಯೇ ನಮೂದಿಸಬೇಕು.

4. ಪತ್ರಿಕೆ–2ರ ವಿಷಯ ಸಾಮಾನ್ಯ ಕನ್ನಡ ಅಥವಾ ಸಾಮಾನ್ಯ ಇಂಗ್ಲೀಷ್ ಇವುಗಳಲ್ಲಿ ಯಾವುದಾದರೂ ಒಂದಕ್ಕೆ ಮಾತ್ರ ಉತ್ತರಿಸಬೇಕಿರುವುದರಿಂದ ಅಭ್ಯರ್ಥಿಗಳು ಅರ್ಜಿಯಲ್ಲಿನ ಕ್ರಮ ಸಂಖ್ಯೆ 3 ರಲ್ಲಿನ ಅಂಕಣದಲ್ಲಿ ಸಾಮಾನ್ಯ ಕನ್ನಡ ಅಥವಾ ಸಾಮಾನ್ಯ ಇಂಗ್ಲೀಷ್ ಎದುರಿಗಿರುವ ಎರಡು ವೃತ್ತಗಳಲ್ಲಿ ತಾವು ಉತ್ತರಿಸಲಿರುವ ವಿಷಯದ ಎದುರಿನ ಒಂದು ವೃತ್ತವನ್ನು ಮಾತ್ರ ಶೇಡ್ ಮಾಡತಕ್ಕದ್ದು. ಎರಡೂ ವೃತ್ತಗಳನ್ನು ಶೇಡ್ ಮಾಡಿದ್ದಲ್ಲಿ ಅಥವಾ ಎರಡೂ ವೃತ್ತಗಳನ್ನು ಖಾಲಿ ಬಿಟ್ಟಲ್ಲಿ ಅಂತಹ ಅರ್ಜಿಗಳನ್ನು ಆಯೋಗವು ಯಾವುದೇ ಮುನ್ಸೂಚನೆ ಇಲ್ಲದೆ ತಿರಸ್ಕರಿಸುವುದು. ಪತ್ರಿಕೆ 2ರ ವಿಷಯ ಬದಲಾವಣೆ ಬಗ್ಗೆ ನಂತರ ಬರುವ ಮನವಿಗಳನ್ನು ಪರಿಗಣಿಸುವುದಿಲ್ಲ.

5. ಅಭ್ಯರ್ಥಿಗಳು ಮೀಸಲಾತಿಗಳನ್ನು ಕೋರಿದ್ದಲ್ಲಿ ಅರ್ಜಿಯಲ್ಲಿ ಮೀಸಲಾತಿಗಾಗಿ ನಿರ್ದಿಷ್ಟಪಡಿಸಿದ ವೃತ್ತಗಳನ್ನು ಬಾಲ್ ಪಾಯಿಂಟ್ ಪೆನ್ನಿನಿಂದ ತುಂಬತಕ್ಕದ್ದು. ಮೀಸಲಾತಿಯ ಸರ್ಕಲ್‌ಗ‌ಳಲ್ಲಿ ಖಾಲಿ ಬಿಟ್ಟಿರುವ ಅಥವಾ ಇತರೆ ಎಂದು ನಮೂದಿಸಿರುವ ಅಭ್ಯರ್ಥಿಗಳ ಮೀಸಲಾತಿಯನ್ನು ಸಾಮಾನ್ಯ ಅರ್ಹತೆಯೆಂದು ಪರಿಗಣಿಸಲಾಗುವುದು. ನಿರ್ದಿಷ್ಟವಾದ ಸರ್ಕಲ್‌ನಲ್ಲಿ ಮೀಸಲಾತಿಯನ್ನು ನಮೂದಿಸದೆ ಬೇರೆ ಕಡೆ ಗುರುತು (ಶೇಡ್) ಮಾಡಿದ್ದಲ್ಲಿ ಅಂತಹವುಗಳನ್ನು ಸಹ ಗಣನೆಗೆ ತೆಗೆದುಕೊಳ್ಳುವುದಿಲ್ಲ. **ಅನ್ವಯಿಸದ ಸರ್ಕಲ್‌ಗಳಲ್ಲಿ ಯಾವುದೇ ಗುರುತನ್ನು ಮಾಡಬಾರದು. ಅರ್ಜಿಯಲ್ಲಿ ಮೀಸಲಾತಿಯನ್ನು ಒಮ್ಮೆ ನಮೂದಿಸಿ ಸಲ್ಲಿಸಿದ ನಂತರ ಯಾವುದೇ ಮೀಸಲಾತಿ ಬದಲಾವಣೆಗೆ ಅವಕಾಶವಿರುವುದಿಲ್ಲ.**

6. ಈ ಸ್ಪರ್ಧಾತ್ಮಕ ಪರೀಕ್ಷೆಗೆ ಸಂಬಂಧಿಸಿದಂತೆ ನಿಗದಿತ ವಿದ್ಯಾರ್ಹತೆ, ತತ್ಸಮಾನ ವಿದ್ಯಾರ್ಹತೆ, ಮೀಸಲಾತಿಯ ಸ್ಪಷ್ಟನಮೂದು, ಹುಟ್ಟಿದ ದಿನಾಂಕ ಅಥವಾ ಇತರೆ ಯಾವುದೇ ಮಾಹಿತಿಯನ್ನು ಅಧಿಸೂಚನೆ ಹಾಗೂ ಅಭ್ಯರ್ಥಿಗಳ ಸೂಚನೆಯಲ್ಲಿನ ವಿವರಣೆಗಳಂತೆ ಅಭ್ಯರ್ಥಿಗಳು ಅರ್ಜಿಯಲ್ಲಿನ ಆಯಾ ಅಂಕಣಗಳಲ್ಲಿ ಭರ್ತಿ ಮಾಡತಕ್ಕದ್ದು.

7. ಅಭ್ಯರ್ಥಿಗಳು ಅರ್ಜಿಯ ನಿಗದಿತ ಅಂಕ‌ಣದಲ್ಲಿ ಪಾಸ್‌ಪೋರ್ಟ್ ಅಳತೆಯ ತಮ್ಮ ಇತ್ತೀಚಿನ ಫೋಟೋವನ್ನು ಅಂಟಿಸಬೇಕು. ಸ್ಟಾಂಪ್ ಅಳತೆಯ ಅಥವಾ ಇನ್ನಿತರ ಯಾವುದೇ ಅಳತೆಯ ಫೋಟೋವನ್ನು ಅಂಟಿಸಬಾರದು.

8. **ಆಯೋಗವು ನಿಗದಿಪಡಿಸಿದ ಅರ್ಜಿ ನಮೂನೆ ಅಲ್ಲದೆ, ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸುವ, ಶುಲ್ಕ ಪಾವತಿಸದೆ ಸಲ್ಲಿಸಲ್ಪಡುವ, ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ ಬಗ್ಗೆ ಮಾಹಿತಿ ನೀಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

19. ಪ್ರಮುಖ ಸೂಚನೆಗಳು:

1. ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.
2. ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನು ಸ್ಕ್ಯಾನ್ ಮಾಡುವುದರಿಂದ ಅರ್ಜಿಗಳನ್ನು ಮಡಚಬಾರದು ಹಾಗೂ ಪಿನ್ ಮಾಡಬಾರದು ಮತ್ತು ಯಾವುದೇ ರೀತಿ ಹಾಳು ಮಾಡಬಾರದು.
3. ಒಬ್ಬನೇ ಅಭ್ಯರ್ಥಿ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ ಯಾವುದಾದರೂ ಒಂದು ಅರ್ಜಿಯನ್ನು ಮಾತ್ರ (ಕ್ರಮಬದ್ಧವಾಗಿದ್ದಲ್ಲಿ) ಪರಿಗಣಿಸಲಾಗುವುದು. ಈ ವಿಚಾರದಲ್ಲಿ ಆಯೋಗದ ತೀರ್ಮಾನವೇ ಅಂತಿಮ. ಇದರಲ್ಲಿ ಅಭ್ಯರ್ಥಿಗಳಿಗೆ ಅನಾನುಕೂಲವಾದಲ್ಲಿ ಆಯೋಗವು ಹೊಣೆಯಾಗುವುದಿಲ್ಲ.
4. ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಡೆದಿರುವ ಮಾಹಿತಿ ಪುಸ್ತಕವನ್ನು ಸ್ಪರ್ಧಾತ್ಮಕ ಪರೀಕ್ಷೆ ಮುಗಿಯುವ ತನಕ ಸುರಕ್ಷಿತವಾಗಿಟ್ಟುಕೊಳ್ಳತಕ್ಕದ್ದು. ಈ ಪುಸ್ತಕದಲ್ಲಿ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ (Horizontal & Vertical Reservations) ವಿಶ್ಲೇಷಣೆ ಇತ್ಯಾದಿ ವಿಷಯಗಳ ಬಗ್ಗೆ ಕೂಲಂಕುಷವಾಗಿ ವಿವರಿಸಿದ್ದು, ಅವುಗಳನ್ನು ಅಭ್ಯರ್ಥಿಗಳು ಗಮನವಿಟ್ಟು ಓದಿಕೊಳ್ಳತಕ್ಕದ್ದು.
5. ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಆಯೋಗವು ಪರಿಶೀಲಿಸಿ ಮೇಲು ನೋಟಕ್ಕೆ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಜಾರಿ ಮಾಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ.
6. ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ, ಪರೀಕ್ಷಾ ಕೇಂದ್ರ ಹಾಗೂ ವಯೋಮಿತಿ ಸಡಿಲಿಕೆ, ಪ್ರಶ್ನೆ ಪತ್ರಿಕೆ–2 ರಲ್ಲಿ ಬರೆಯುವ ವಿಷಯ, ಇತ್ಯಾದಿ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು ಹಾಗೂ ಈ ಬಗ್ಗೆ ಆನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಕೋರಿಕೆ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.
7. **ಪರೀಕ್ಷೆಯ ಪ್ರವೇಶಕ್ಕಾಗಿ ನೀಡುವ ಪ್ರವೇಶ ಪತ್ರದಲ್ಲಿ ಕೆಲವು ಅಭ್ಯರ್ಥಿಗಳ ಹೆಸರನ್ನು ತಾಂತ್ರಿಕ ಕಾರಣದಿಂದಾಗಿ ಮೊಟಕುಗೊಳಿಸಲಾಗುವುದು ಎಂಬುದನ್ನು ಅಭ್ಯರ್ಥಿಗಳು ಗಮನಿಸತಕ್ಕದ್ದು.ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.**

20. ಆಯೋಗದೊಡನೆ ಪತ್ರ ವ್ಯವಹಾರ:

ಆಯೋಗವು ಅಭ್ಯರ್ಥಿತ್ವದ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದಾಗ್ಯೂ ಪರೀಕ್ಷೆಗಾಗಿ ಪ್ರವೇಶ ಪತ್ರ ಬಾರದಿದ್ದಲ್ಲಿ, ಅಭ್ಯರ್ಥಿಯು ಆಯೋಗದ ಕಛೇರಿಯನ್ನು ಖುದ್ದಾಗಿ ಅಥವಾ ದೂರವಾಣಿ ಮೂಲಕ ಸಂಪರ್ಕಿಸತಕ್ಕದ್ದು. (ದೂರವಾಣಿ ಸಂಖ್ಯೆ: 30574957) ಮಾಹಿತಿಗಾಗಿ ಸಂಪರ್ಕಿಸುವ ಸಮಯದಲ್ಲಿ ಈ ಹುದ್ದೆಗಳಿಗೆ ಸಲ್ಲಿಸಿದ ಅರ್ಜಿಯ ಕ್ರಮಸಂಖ್ಯೆ, ಜನ್ಮ ದಿನಾಂಕ, ಕೋರಿದ ಪರೀಕ್ಷಾ ಕೇಂದ್ರ ಇತ್ಯಾದಿ ವಿವರಗಳನ್ನು ನೀಡತಕ್ಕದ್ದು. ಪ್ರವೇಶ ಪತ್ರ ಹೊಂದಿಲ್ಲದ ಅಭ್ಯರ್ಥಿಗೆ ಪರೀಕ್ಷೆಯನ್ನು ಬರೆಯಲು ಅನುಮತಿಸುವುದಿಲ್ಲ.

ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿ ಈ ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು.

1. ಅರ್ಜಿಯ ನಕಲು ಪ್ರತಿ
2. ಅರ್ಜಿ ಸಲ್ಲಿಸಿದ ಬಗ್ಗೆ ಆಯೋಗದ ಕಛೇರಿ ಅಥವಾ ಅಂಚೆ ಕಛೇರಿಯವರು ನೀಡಿದ ಅರ್ಜಿ ಸ್ವೀಕೃತಿ ಪತ್ರ/ ಕೌಂಟರ್ ಫಾಯಿಲ್

21. ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳತಕ್ಕದ್ದು:–

| | | | | | |
|---|---|---|---|---|---|
| **GM** | **-** | **General Merit** | **3B** | **:** | **Category 3B** |
| **SC** | **-** | **Scheduled Caste** | **W** | **:** | **Women Candidate** |
| **ST** | **-** | **Scheduled Tribe** | **RR** | **:** | **Rural Reservation** |
| **C-1** | **-** | **Category - I** | **KMS** | **:** | **Kannada Medium Student** |
| **2A** | **-** | **Category - 2A** | **PH** | **:** | **Physically Handicapped** |
| **2B** | **-** | **Category – 2B** | **P.D.P** | **:** | **Project Displaced Person** |
| **3A** | **-** | **Category - 3A** | **Ex-Mp** | **:** | **Ex-Military Person** |

22. ದುರ್ನಡತೆ :

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಾಸ್ತಾವೇಜು ಅಥವಾ ತಿದ್ದಲ್ಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯೋಗದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಆಯೋಗವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

**ಡಾ|| ಹೆಚ್. ವಿ. ಪಾರ್ಶ್ವನಾಥ**
ಕಾರ್ಯದರ್ಶಿ
ಕರ್ನಾಟಕ ಲೋಕಸೇವಾ ಆಯೋಗ

**ಅನುಬಂಧ**

**ಪರೀಕ್ಷಾ ಕೇಂದ್ರಗಳ ಹೆಸರು ಮತ್ತು ಅವುಗಳ ಕೋಡ್ ಸಂಖ್ಯೆಗಳು**

| ಪರೀಕ್ಷಾ ಕೇಂದ್ರಗಳು | ಕೋಡ್ ಸಂಖ್ಯೆಗಳು | ಪರೀಕ್ಷಾ ಕೇಂದ್ರಗಳು | ಕೋಡ್ ಸಂಖ್ಯೆಗಳು |
|---|---|---|---|
| ಬೆಂಗಳೂರು ನಗರ | 1 | ಅರಸೀಕೆರೆ | 25 |
| ರಾಮನಗರ | 2 | ಹಾವೇರಿ | 26 |
| ಬೆಳಗಾವಿ | 3 | ರಾಣೆಬೆನ್ನೂರು | 27 |
| ಬಳ್ಳಾರಿ | 4 | ಕಾರವಾರ | 28 |
| ಹೊಸಪೇಟೆ | 5 | ಶಿರ್ಸಿ | 29 |
| ಬೀದರ್ | 6 | ಕೋಲಾರ | 30 |
| ಬಾಲ್ಕೀ | 7 | ಕೆ.ಜಿ.ಎಫ್ | 31 |
| ಬಿಜಾಪುರ | 8 | ಚಿಕ್ಕಬಳ್ಳಾಪುರ | 32 |
| ಬಾಗಲಕೋಟೆ | 9 | ಕೊಪ್ಪಳ | 33 |
| ಜಮಖಂಡಿ | 10 | ಗಂಗಾವತಿ | 34 |
| ಚಿಕ್ಕಮಗಳೂರು | 11 | ಮಂಡ್ಯ | 35 |

| ಪರೀಕ್ಷಾ ಕೇಂದ್ರಗಳು | ಕೋಡ್ ಸಂಖ್ಯೆಗಳು | ಪರೀಕ್ಷಾ ಕೇಂದ್ರಗಳು | ಕೋಡ್ ಸಂಖ್ಯೆಗಳು |
|---|---|---|---|
| ಕಡೂರು | 12 | ಮಂಗಳೂರು | 36 |
| ಚಿತ್ರದುರ್ಗ | 13 | ಮಡಿಕೇರಿ | 37 |
| ಹಿರಿಯೂರು | 14 | ಮೈಸೂರು | 38 |
| ಚಾಮರಾಜನಗರ | 15 | ರಾಯಚೂರು | 39 |
| ಧಾರವಾಡ | 16 | ಸಿಂಧನೂರು | 40 |
| ಹುಬ್ಬಳ್ಳಿ | 17 | ಲಿಂಗಸುಗೂರು | 41 |
| ದಾವಣಗೆರೆ | 18 | ಶಿವಮೊಗ್ಗ | 42 |
| ಹರಿಹರ | 19 | ಸಾಗರ | 43 |
| ಗುಲ್ಬರ್ಗಾ | 20 | ಭದ್ರಾವತಿ | 44 |
| ಯಾದಗಿರಿ | 21 | ತುಮಕೂರು | 45 |
| ಗದಗ | 22 | ಮಧುಗಿರಿ | 46 |
| ಹಾಸನ | 23 | ತಿಪಟೂರು | 47 |
| ಚನ್ನರಾಯಪಟ್ಟಣ | 24 | ಉಡುಪಿ | 48 |

ಅನುಬಂಧ – 2

**ಸಹಾಯಕ / ಪ್ರಥಮ ದರ್ಜೆ ಸಹಾಯಕ ಹುದ್ದೆಯ ಸ್ಪರ್ಧಾತ್ಮಕ ಪರೀಕ್ಷೆಯ ಪಠ್ಯಕ್ರಮ**

ಈ ಪರೀಕ್ಷೆಯು ಎರಡು ಪತ್ರಿಕೆಗಳನ್ನು ಹೊಂದಿರುತ್ತದೆ:

1) ಸಾಮಾನ್ಯ ಜ್ಞಾನದ ಒಂದು ಪತ್ರಿಕೆ ಮತ್ತು
2) ಸಾಮಾನ್ಯ ಕನ್ನಡ/ಸಾಮಾನ್ಯ ಇಂಗ್ಲೀಷಿನ ಒಂದು ಪತ್ರಿಕೆ

ಪ್ರತಿಯೊಂದು ಪತ್ರಿಕೆಯ ಗರಿಷ್ಠ ಅಂಕಗಳು 150 ಆಗಿರುತ್ತದೆ ಮತ್ತು ಪ್ರತಿಯೊಂದು ಪತ್ರಿಕೆಯನ್ನು 2 ಘಂಟೆ ಸಮಯದಲ್ಲಿ ಉತ್ತರಿಸಬೇಕಾಗುತ್ತದೆ. ಈ ಎರಡು ಪತ್ರಿಕೆಗಳು "ವಸ್ತುನಿಷ್ಠ ಬಹು ಆಯ್ಕೆಯ" ವಿಧಾನದ್ದಾಗಿರುವುದು. (Objective Multiple Choice Type)

- ಸಾಮಾನ್ಯ ಜ್ಞಾನ ಪತ್ರಿಕೆಯು ಸಾಮಾನ್ಯವಾಗಿ ವಿಶ್ವವಿದ್ಯಾನಿಲಯದ ಪದವಿ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರುವ ವಿದ್ಯಾರ್ಥಿಗೆ ಇರಬೇಕಾದ ಸಾಮಾನ್ಯ ಜ್ಞಾನಕ್ಕೆ ಸಂಬಂಧಪಟ್ಟ ಕನಿಷ್ಠ ವಿದ್ಯಾಮಟ್ಟಕ್ಕೆ ಸಮನಾಗಿರುವುದು ಮತ್ತು ಇದು ಭಾರತ ಸಂವಿಧಾನ, ಭಾರತದ ಇತಿಹಾಸ, ಮತ್ತು ಸಂಸ್ಕೃತಿ, ಭಾರತದ ಸಾಮಾನ್ಯ ಹಾಗೂ ಆರ್ಥಿಕ, ಭೂಗೋಳ ಶಾಸ್ತ್ರ, ಇತ್ತೀಚಿನ ಘಟನೆಗಳು, ದೈನಿಕ ಜೀವನದಲ್ಲಿ ವಿಜ್ಞಾನ ಮತ್ತು ಒಬ್ಬ ವಿದ್ಯಾವಂತ ವ್ಯಕ್ತಿಯು ದೈನಂದಿನ ಜೀವನದಲ್ಲಿ ಗಮನಿಸಬಹುದಾದಂತಹ ವಿಷಯಗಳು. ಇವುಗಳ ಮೇಲಿನ ಪ್ರಶ್ನೆಗಳನ್ನು ಒಳಗೊಂಡಿರುತ್ತದೆ.
- ಅಭ್ಯರ್ಥಿಗಳು ಪ್ರಶ್ನೆ ಪತ್ರಿಕೆಗಳಿಗೆ ಉತ್ತರವನ್ನು ಪೂರ್ಣವಾಗಿ ಕನ್ನಡ ಅಥವಾ ಇಂಗ್ಲೀಷಿನಲ್ಲಿ ಉತ್ತರಿಸಬೇಕು. ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಕನ್ನಡದಲ್ಲಿ, ಕೆಲವು ಪ್ರಶ್ನೆಗಳಿಗೆ ಇಂಗ್ಲೀಷಿನಲ್ಲಿ ಉತ್ತರಿಸಬಾರದು.
- ಸಾಮಾನ್ಯ ಕನ್ನಡ ಅಥವಾ ಸಾಮಾನ್ಯ ಇಂಗ್ಲೀಷ್ ಪತ್ರಿಕೆಯು ಸಾಮಾನ್ಯವಾಗಿ ವಿಶ್ವವಿದ್ಯಾಲಯದ ಪದವಿ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರುವ ವಿದ್ಯಾರ್ಥಿಗೆ ಇರಬೇಕಾದ ಕನಿಷ್ಠ ವಿದ್ಯಾಮಟ್ಟಕ್ಕೆ ಸಮನಾಗಿರುವುದು. ಇದರ ಮೂಲಕ ಅಭ್ಯರ್ಥಿಯ ಕನ್ನಡ / ಇಂಗ್ಲೀಷ್ ವ್ಯಾಕರಣ, ಶಬ್ಧ ಸಂಪತ್ತು, ಕಾಗುಣಿತ (Spelling) ಸಮನಾರ್ಥಕ ಪದಗಳು, ವಿರುದ್ಧಾರ್ಥಕ ಪದಗಳು ಇವುಗಳ ಪರಿಜ್ಞಾನ, ಇಂಗ್ಲೀಷ್ / ಕನ್ನಡ ಭಾಷೆಯನ್ನು ಅರಿಯುವ ಮತ್ತು ಗ್ರಹಿಸುವ ಅಭ್ಯರ್ಥಿಯ ಶಕ್ತಿಯ ಮತ್ತು ಅದರ ಸರಿಯಾದ ಹಾಗೂ ತಪ್ಪು ಬಳಕೆ ಇತ್ಯಾದಿಗಳನ್ನು ಪರಿಶೀಲಿಸುವ ಅಭ್ಯರ್ಥಿಯ ಸಾಮರ್ಥ್ಯ ಇವುಗಳನ್ನು ಪರೀಕ್ಷಿಸಲು ಉದ್ದೇಶಿಸಲಾಗಿದೆ.
- ಅಭ್ಯರ್ಥಿಗಳು ಸಾಮಾನ್ಯ ಕನ್ನಡ ಅಥವಾ ಸಾಮಾನ್ಯ ಇಂಗ್ಲೀಷ್ ಪತ್ರಿಕೆಗಳಲ್ಲಿ ಯಾವುದಾದರೂ ಒಂದಕ್ಕೆ ಉತ್ತರಿಸಬಹುದು.

**SYLLABUS**

1. Syllabus for the competitive examination for recruitment to the cadre of Assistants and First Division Assistants:

   The examination will consist of two written papers, namely,-

   1) a paper on General Knowledge and
   2) a paper on General English or General Kannada

   The maximum marks for each paper will be 150. The questions in both the papers will be "Objective Multiple Choice Type". The duration for each paper will be 2 hours.

2a. The paper on General Knowledge will normally conform to the minimum standard relating to General Knowledge, expected of a student who has passed Bachelor's Degree Examination of a University and will cover questions on the Constitution of India, Indian History and Culture,

General and Economic Geography of India, Current Events, every day science and such matters of every day observation as may be expected of an educated person.

2b. The candidates may answer this entire paper either in English or in Kannada but they shall not answer some questions in English and some in Kannada.

3a. The paper on General English or General Kannada will normally conform to the minimum standard expected of a student who has passed the Bacheolor's Degree Examination of a University. It is intended to test candidate's knowledge of English/Kannada grammar, vocabulary, spelling, synonyms, antonyms, his power to understand and comprehend English/Kannada language and his ability to discriminate between correct and incorrect usage, etc.

3b. The candidates may answer either the paper on General English or the paper on General Kannada.

ಅನುಬಂಧ – 3

**ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯ ಪಠ್ಯಕ್ರಮ**

ಈ ಪರೀಕ್ಷೆಯು ಎರಡು ಪತ್ರಿಕೆಗಳನ್ನು ಹೊಂದಿರುತ್ತದೆ.

1) ಸಾಮಾನ್ಯ ಜ್ಞಾನದ ಒಂದು ಪತ್ರಿಕೆ ಮತ್ತು

2) ಸಾಮಾನ್ಯ ಕನ್ನಡ/ಸಾಮಾನ್ಯ ಇಂಗ್ಲೀಷಿನ ಒಂದು ಪತ್ರಿಕೆ

ಪ್ರತಿಯೊಂದು ಪತ್ರಿಕೆಯ ಗರಿಷ್ಠ ಅಂಕಗಳು 150 ಆಗಿರುತ್ತದೆ ಮತ್ತು ಪ್ರತಿಯೊಂದು ಪತ್ರಿಕೆಯನ್ನು 2 ಘಂಟೆ ಸಮಯದಲ್ಲಿ ಉತ್ತರಿಸಬೇಕಾಗುತ್ತದೆ. ಈ ಎರಡು ಪತ್ರಿಕೆಗಳು "ವಸ್ತುನಿಷ್ಠ ಬಹು ಆಯ್ಕೆಯ" ವಿಧಾನದ್ದಾಗಿರುವುದು. (Objective Multiple Choice Type)

- ಸಾಮಾನ್ಯ ಜ್ಞಾನ ಪತ್ರಿಕೆಯು ಸಾಮಾನ್ಯವಾಗಿ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ವಿದ್ಯಾರ್ಥಿಗಳಿಗೆ ಇರಬೇಕಾದ ಸಾಮಾನ್ಯ ಜ್ಞಾನಕ್ಕೆ ಸಂಬಂಧಪಟ್ಟ ಕನಿಷ್ಠ ವಿದ್ಯಾಮಟ್ಟಕ್ಕೆ ಸಮನಾಗಿರುವುದು ಮತ್ತು ಇದು ಭಾರತದ ಸಂವಿಧಾನ, ಭಾರತದ ಇತಿಹಾಸ ಮತ್ತು ಸಂಸ್ಕೃತಿ, ಸಾಮಾನ್ಯ ಅರ್ಥಶಾಸ್ತ್ರ, ಭೂಗೋಳ ಶಾಸ್ತ್ರ, ಇತ್ತೀಚಿನ ಘಟನೆಗಳು, ದೈನಿಕ ಜೀವನದಲ್ಲಿ ವಿಜ್ಞಾನ ಮತ್ತು ಒಬ್ಬ ವಿದ್ಯಾವಂತ ವ್ಯಕ್ತಿಯು ದೈನಂದಿನ ಜೀವನದಲ್ಲಿ ಗಮನಿಸಬಹುದಾದಂತಹ ವಿಷಯಗಳು ಇವುಗಳ ಮೇಲಿನ ಪ್ರಶ್ನೆಗಳನ್ನು ಒಳಗೊಂಡಿರುತ್ತದೆ.
- ಅಭ್ಯರ್ಥಿಗಳು ಪ್ರಶ್ನೆ ಪತ್ರಿಕೆಗಳಿಗೆ ಉತ್ತರವನ್ನು ಪೂರ್ಣವಾಗಿ ಕನ್ನಡ ಅಥವಾ ಇಂಗ್ಲೀಷಿನಲ್ಲಿ ಉತ್ತರಿಸಬೇಕು. ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಕನ್ನಡದಲ್ಲಿ, ಕೆಲವು ಪ್ರಶ್ನೆಗಳಿಗೆ ಇಂಗ್ಲೀಷಿನಲ್ಲಿ ಉತ್ತರಿಸಬಾರದು.
- ಸಾಮಾನ್ಯ ಕನ್ನಡ ಅಥವಾ ಸಾಮಾನ್ಯ ಇಂಗ್ಲೀಷಿನ ಪತ್ರಿಕೆಯು ಸಾಮಾನ್ಯವಾಗಿ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರುವ ವಿದ್ಯಾರ್ಥಿಗೆ ಇರಬೇಕಾದ ಕನಿಷ್ಠ ವಿದ್ಯಾಮಟ್ಟಕ್ಕೆ ಸಮನಾಗಿರುವುದು. ಇದರ ಮೂಲಕ ಅಭ್ಯರ್ಥಿಯ ಕನ್ನಡ ಮತ್ತು ಇಂಗ್ಲೀಷ್ ವ್ಯಾಕರಣ ಶಬ್ದ ಸಂಪತ್ತು, ಕಾಗುಣಿತ (Spelling) ಸಮನಾರ್ಥಕ ಪದಗಳು, ವಿರುದ್ಧಾರ್ಥಕ ಪದಗಳು ಇವುಗಳ ಪರಿಜ್ಞಾನ, ಇಂಗ್ಲೀಷ್/ಕನ್ನಡ ಭಾಷೆಯನ್ನು ಅರಿಯುವ ಮತ್ತು ಗ್ರಹಿಸುವ ಅಭ್ಯರ್ಥಿಯ ಶಕ್ತಿಯ ಮತ್ತು ಅದರ ಸರಿಯಾದ ಹಾಗೂ ತಪ್ಪು ಬಳಕೆ ಇತ್ಯಾದಿಗಳನ್ನು ಪರಿಶೀಲಿಸುವ ಅಭ್ಯರ್ಥಿಯ ಸಾಮರ್ಥ್ಯ ಇವುಗಳನ್ನು ಪರೀಕ್ಷಿಸಲು ಉದ್ದೇಶಿಸಲಾಗಿದೆ.
- ಅಭ್ಯರ್ಥಿಗಳು ಸಾಮಾನ್ಯ ಕನ್ನಡ ಅಥವಾ ಸಾಮಾನ್ಯ ಇಂಗ್ಲೀಷ್ ಪತ್ರಿಕೆಗಳಲ್ಲಿ ಯಾವುದಾದರೂ ಒಂದಕ್ಕೆ ಉತ್ತರಿಸಬಹುದು.

**SYLLABUS**

1. Syllabus for the competitive examination for recruitment to the cadre of Junior Assistants and Second Division Assistants:

The examination will consist of two written papers, namely,-

1) a paper on General Knowledge and

2) a paper on General English or General Kannada

The maximum marks for each paper will be 150. The questions in both the papers will be "Objective Multiple Choice Type". The duration for each paper will be 2 hours.

2a. The paper on General Knowledge will normally conform to the minimum standard relating to General Knowledge, expected of a student who has passed S.S.L.C Examination and will cover topics relating to Constitution of India, Indian History and Culture, General and Economic Geography of India, Current Events, every day science and such matters of every day observation as may be expected of an educated person.

2b. The candidates may answer this entire paper either in English or in Kannada but they shall not answer some questions in English and some in Kannada.

3a. The paper on General English or General Kannada will normally conform to the minimum standard expected of a student who has passed the S.S.L.C Examination. It is intended to test candidate's knowledge of English/Kannada grammar, vocabulary, spelling, synonyms, antonyms, his power to understand and comprehend English/Kannada language and his ability to discriminate between correct and incorrect usage, etc

3b. The candidates may answer either the paper on General English or the paper on General Kannada.

ಅನುಬಂಧ – 4

ಸಹಾಯಕ / ಪ್ರಥಮ ದರ್ಜೆ ಸಹಾಯಕರ ನೇಮಕಾತಿಗೆ ಸಂಬಂಧಿಸಿದ ಇಲಾಖಾವಾರು ಹುದ್ದೆಗಳ ಪಟ್ಟಿ

| ಕ್ರಮ ಸಂಖ್ಯೆ | ಇಲಾಖೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1. | ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು | 10 |
| 2. | ಆಯುಕ್ತರು, ಅಬಕಾರಿ ಇಲಾಖೆ | 50 |
| 3. | ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು | 04 |
| 4. | ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು | 123 |
| 5. | ಕರ್ನಾಟಕ ಲೋಕಾಯುಕ್ತ, ಬೆಂಗಳೂರು | 09 |
| 6. | ನಿರ್ದೇಶಕರು ಖಜಾನೆ ಇಲಾಖೆ – ಬೆಂಗಳೂರು ವಿಭಾಗ | 82 |
| 7. | ಖಜಾನೆ ಇಲಾಖೆ – ಮೈಸೂರು ವಿಭಾಗ | 43 |
| 8. | ಖಜಾನೆ ಇಲಾಖೆ – ಬೆಳಗಾಂ ವಿಭಾಗ | 30 |
| 9. | ಖಜಾನೆ ಇಲಾಖೆ – ಗುಲ್ಬರ್ಗಾ ವಿಭಾಗ | 25 |
| 10. | ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು | 08 |
| 11. | ಆಡಳಿತ ತರಬೇತಿ ಸಂಸ್ಥೆ ಮೈಸೂರು | 13 |
| 12. | ಆಯುಕ್ತರು, ಪ್ರವಾಸೋದ್ಯಮ ಇಲಾಖೆ | 03 |
| 13. | ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು | 43 |
| 14. | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ | 500 |
| 15. | ಎನ್.ಸಿ.ಸಿ. ನಿರ್ದೇಶನಾಲಯ (ರಾಜ್ಯಕೋಶ,) ಬೆಂಗಳೂರು | 33 |
| 16. | ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ | 06 |
| 17. | ನಿರ್ದೇಶಕರು, ತೋಟಗಾರಿಕೆ ಇಲಾಖೆ | 30 |
| 18. | ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ ಇಲಾಖೆ ಬೆಂಗಳೂರು. | 50 |
| 19. | ಆಯುಕ್ತರು, ಕಾರ್ಮಿಕ ಇಲಾಖೆ, ಬೆಂಗಳೂರು | 28 |
| 20. | ಕೈಮಗ್ಗ ಮತ್ತು ಜವಳಿ ಇಲಾಖೆ | 07 |
| 21. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ | 06 |
| 22. | ಪದವಿಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು | 58 |
| 23. | ನೋಂದಣಿ ಮತ್ತು ಮುದ್ರಾಂಕ ಇಲಾಖೆ, ಬೆಂಗಳೂರು | 18 |
| 24. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ತುಮಕೂರು | 02 |
| 25. | ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು | 06 |
| 26. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ್ | 02 |
| 27. | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು | 04 |
| 28. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ | 02 |
| 29. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ್ | 02 |
| 30. | ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು | 02 |
| 31. | ಕೃಷಿ ಇಲಾಖೆ, ಬೆಂಗಳೂರು | 40 |
| | ಒಟ್ಟು | 1239 |

| ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.,ಸೈ. | ಕ'ಮಾ.ಅ | ಯೋ.ಅ | ಅಂ.ವಿ | ಒಟ್ಟು. |
| ಪ.ಜಾ. | | 1 | 1 | | | | | 2 |
| ಪ್ರ–2(ಎ) | | 1 | 1 | | | | | 2 |
| ಪ್ರ.–3(ಬಿ) | 1 | | | | | | | 1 |
| ಸಾ.ಅ | 1 | 2 | 2 | | | | | 5 |
| ಒಟ್ಟು. | 2 | 4 | 4 | | | | | 10 |

| ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು. | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 1 | | | | | | | 1 |
| ಪ.ಪಂ | 1 | | | | | | | 1 |
| ಸಾ.ಅ | 1 | 1 | | | | | | 2 |
| ಒಟ್ಟು. | 3 | 1 | | | | | | 4 |

| ಆಯುಕ್ತರು, ಅಬಕಾರಿ ಇಲಾಖೆ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 2 | 2 | 3 | 1 | | | | 8 |
| ಪ.ಪಂ | | 1 | | | | | | 1 |
| ಪ್ರವರ್ಗ–1 | | 1 | 1 | | | | | 2 |
| ಪ್ರ.–2(ಎ) | 2 | 3 | 3 | | | | | 8 |
| ಪ್ರ.–2(ಬಿ) | | 1 | 1 | | | | | 2 |
| ಪ್ರ–3(ಎ) | 1 | 1 | | | | | | 2 |
| ಪ್ರ.–3(ಬಿ) | 1 | 1 | | | | | | 2 |
| ಸಾ.ಅ | 6 | 7 | 6 | 3 | 1 | 1 | 1 | 25 |
| ಒಟ್ಟು. | 12 | 17 | 14 | 04 | 01 | 01 | 01 | 50 |

| ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು. | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ. | 4 | 6 | 4 | 1 | 1 | 1 | 1 | 18 |
| ಪ.ಪಂ | 1 | 1 | 2 | | | | | 4 |
| ಪ್ರವರ್ಗ–1 | 2 | 2 | 1 | | | | | 5 |
| ಪ್ರ.–2(ಎ) | 4 | 5 | 4 | 2 | 1 | 1 | 1 | 18 |
| ಪ್ರ.–2(ಬಿ) | 2 | 1 | 2 | | | | | 5 |
| ಪ್ರ–3(ಎ) | 2 | 1 | 2 | | | | | 5 |
| ಪ್ರ.–3(ಬಿ) | 2 | 2 | 3 | | | | | 7 |
| ಸಾ.ಅ | 13 | 18 | 15 | 6 | 3 | 3 | 3 | 61 |
| ಒಟ್ಟು. | 30 | 36 | 33 | 9 | 5 | 5 | 5 | 123 |

| ಕರ್ನಾಟಕ ಲೋಕಾಯುಕ್ತ, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ. | | 1 | | | | | | 1 |
| ಪ್ರವರ್ಗ–1 | 1 | | | | | | | 1 |
| ಪ್ರ.–2(ಎ) | 1 | | | | | | | 1 |
| ಪ್ರ.–2(ಬಿ) | 1 | | | | | | | 1 |
| ಸಾ.ಅ | 1 | 2 | 2 | | | | | 5 |
| ಒಟ್ಟು. | 4 | 3 | 2 | | | | | 9 |

| ನಿರ್ದೇಶಕರು ಖಜಾನೆ ಇಲಾಖೆ, ಬೆಂಗಳೂರು ವಿಭಾಗ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ. | 2 | 4 | 4 | 1 | 1 | | | 12 |
| ಪ.ಪಂ | | 1 | 1 | | | | | 2 |
| ಪ್ರವರ್ಗ–1 | 1 | 1 | 1 | | | | | 3 |
| ಪ್ರ.–2(ಎ) | 4 | 4 | 4 | 1 | | | | 13 |
| ಪ್ರ.–2(ಬಿ) | 2 | 1 | 1 | | | | | 4 |
| ಪ್ರ–3(ಎ) | 1 | 1 | 1 | | | | | 3 |
| ಪ್ರ.–3(ಬಿ) | 2 | 1 | 1 | | | | | 4 |
| ಸಾ.ಅ | 8 | 12 | 11 | 4 | 2 | 2 | 2 | 41 |
| ಒಟ್ಟು. | 20 | 25 | 24 | 6 | 3 | 2 | 2 | 82 |

| ನಿರ್ದೇಶಕರು ಖಜಾನೆ ಇಲಾಖೆ, ಮೈಸೂರು ವಿಭಾಗ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ. | 2 | 3 | 2 | | | | | 7 |
| ಪ.ಪಂ. | | 1 | | | | | | 1 |
| ಪ್ರವರ್ಗ–1 | | 1 | | | | | | 1 |
| ಪ್ರ.–2(ಎ) | 2 | 3 | 2 | | | | | 7 |
| ಪ್ರ.–2(ಬಿ) | 1 | 1 | | | | | | 2 |
| ಪ್ರ–3(ಎ) | 1 | 1 | | | | | | 2 |
| ಪ್ರ.–3(ಬಿ) | 1 | 1 | | | | | | 2 |
| ಸಾ.ಅ | 4 | 6 | 6 | 2 | 1 | 1 | 1 | 21 |
| ಒಟ್ಟು. | 11 | 17 | 10 | 2 | 1 | 1 | 1 | 43 |

| ನಿರ್ದೇಶಕರು ಖಜಾನೆ ಇಲಾಖೆ, ಬೆಳಗಾಂ ವಿಭಾಗ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 1 | 2 | 2 | | | | | 5 |
| ಪ್ರವರ್ಗ–1 | | 1 | | | | | | 1 |
| ಪ್ರ.–2(ಎ) | 1 | 2 | 2 | | | | | 5 |
| ಪ್ರ.–2(ಬಿ) | 1 | 1 | | | | | | 2 |
| ಪ್ರ–3(ಎ) | 1 | | | | | | | 1 |
| ಪ್ರ.–3(ಬಿ) | 1 | | | | | | | 1 |
| ಸಾ.ಅ | 2 | 4 | 4 | 2 | 1 | 1 | 1 | 15 |
| ಒಟ್ಟು. | 7 | 10 | 8 | 2 | 1 | 1 | 1 | 30 |

| ನಿರ್ದೇಶಕರು ಖಜಾನೆ ಇಲಾಖೆ, ಗುಲ್ಬರ್ಗಾ ವಿಭಾಗ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 1 | 2 | 1 | | | | | 4 |
| ಪ.ಪಂ. | 1 | | | | | | | 1 |
| ಪ್ರವರ್ಗ–1 | 1 | | | | | | | 1 |
| ಪ್ರ.–2(ಎ) | 2 | 1 | 1 | | | | | 4 |
| ಪ್ರ.–2(ಬಿ) | 1 | | | | | | | 1 |
| ಪ್ರ–3(ಎ) | 1 | | | | | | | 1 |
| ಪ್ರ.–3(ಬಿ) | 1 | | | | | | | 1 |
| ಸಾ.ಅ | 3 | 4 | 4 | 1 | | | | 12 |
| ಒಟ್ಟು. | 11 | 7 | 6 | 1 | | | | 25 |

| ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | | 1 | | | | | | 1 |
| ಪ.ಪಂ | 1 | | | | | | | 1 |
| ಪ್ರವರ್ಗ–1 | 1 | | | | | | | 1 |
| ಪ್ರ.–2(ಎ) | 1 | | | | | | | 1 |
| ಸಾ.ಅ | 2 | 1 | 1 | | | | | 4 |
| ಒಟ್ಟು. | 5 | 2 | 1 | | | | | 8 |

| ಆಡಳಿತ ತರಬೇತಿ ಸಂಸ್ಥೆ ಮೈಸೂರು. | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 1 | 1 | | | | | | 2 |
| ಪ.ಪಂ | 1 | | | | | | | 1 |
| ಪ್ರವರ್ಗ–1 | 1 | | | | | | | 1 |
| ಪ್ರ.–2(ಎ) | 1 | 1 | | | | | | 2 |
| ಪ್ರ.–2(ಬಿ) | 1 | | | | | | | 1 |
| ಸಾ.ಅ | 2 | 2 | 2 | | | | | 6 |
| ಒಟ್ಟು. | 7 | 4 | 2 | | | | | 13 |

| ಆಯುಕ್ತರು, ಪ್ರವಾಸೋದ್ಯಮ ಇಲಾಖೆ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 1 | | | | | | | 1 |
| ಪ.ಪಂ | 1 | | | | | | | 1 |
| ಸಾ.ಅ | 1 | | | | | | | 1 |
| ಒಟ್ಟು | 3 | | | | | | | 3 |

| ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 3 | 2 | 2 | | | | | 7 |
| ಪ.ಪಂ | 1 | 1 | | | | | | 2 |
| ಪ್ರವರ್ಗ–1 | 1 | 1 | | | | | | 2 |
| ಪ್ರ.–2(ಎ) | 2 | 2 | 2 | | | | | 6 |
| ಪ್ರ.–2(ಬಿ) | 1 | 1 | | | | | | 2 |
| ಪ್ರ–3(ಎ) | 1 | | | | | | | 1 |
| ಪ್ರ.–3(ಬಿ) | 1 | 1 | | | | | | 2 |
| ಸಾ.ಅ | 5 | 6 | 5 | 2 | 1 | 1 | 1 | 21 |
| ಒಟ್ಟು | 15 | 14 | 9 | 2 | 1 | 1 | 1 | 43 |

| ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 16 | 23 | 19 | 7 | 4 | 3 | 3 | 75 |
| ಪ.ಪಂ | 4 | 5 | 4 | 1 | 1 | | | 15 |
| ಪ್ರವರ್ಗ–1 | 4 | 6 | 5 | 2 | 1 | 1 | 1 | 20 |
| ಪ್ರ.–2(ಎ) | 16 | 23 | 19 | 7 | 4 | 3 | 3 | 75 |
| ಪ್ರ.–2(ಬಿ) | 4 | 6 | 5 | 2 | 1 | 1 | 1 | 20 |
| ಪ್ರ–3(ಎ) | 4 | 6 | 5 | 2 | 1 | 1 | 1 | 20 |
| ಪ್ರ.–3(ಬಿ) | 6 | 8 | 6 | 2 | 1 | 1 | 1 | 25 |
| ಸಾ.ಅ | 51 | 75 | 63 | 25 | 12 | 12 | 12 | 250 |
| ಒಟ್ಟು | 105 | 152 | 126 | 48 | 25 | 22 | 22 | 500 |

ಎನ್.ಸಿ.ಸಿ. ನಿರ್ದೇಶನಾಲಯ (ರಾಜ್ಯಕೋಶ,) ಬೆಂಗಳೂರು

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
|---|---|---|---|---|---|---|---|---|
| ಪ.ಜಾ | 2 | 1 | 2 | | | | | 5 |
| ಪ.ಪಂ | | 1 | | | | | | 1 |
| ಪ್ರವರ್ಗ–1 | | 1 | | | | | | 1 |
| ಪ್ರ.–2(ಎ) | 1 | 2 | 2 | | | | | 5 |
| ಪ್ರ.–2(ಬಿ) | 1 | 1 | | | | | | 2 |
| ಪ್ರ–3(ಎ) | 1 | | | | | | | 1 |
| ಪ್ರ.–3(ಬಿ) | 1 | | | | | | | 1 |
| ಸಾ.ಅ | 3 | 5 | 4 | 2 | 1 | 1 | 1 | 17 |
| ಒಟ್ಟು. | 9 | 11 | 8 | 2 | 1 | 1 | 1 | 33 |

ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ, ಬೆಂಗಳೂರು

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
|---|---|---|---|---|---|---|---|---|
| ಪ.ಜಾ | | 1 | | | | | | 1 |
| ಪ್ರ.–2(ಎ) | | 1 | | | | | | 1 |
| ಪ್ರ.–2(ಬಿ) | 1 | | | | | | | 1 |
| ಸಾ.ಅ | 1 | 1 | 1 | | | | | 3 |
| ಒಟ್ಟು. | 2 | 3 | 1 | | | | | 6 |

ನಿರ್ದೇಶಕರು, ತೋಟಗಾರಿಕೆ ಇಲಾಖೆ, ಬೆಂಗಳೂರು

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
|---|---|---|---|---|---|---|---|---|
| ಪ.ಜಾ | 2 | 2 | 1 | | | | | 5 |
| ಪ.ಪಂ | 1 | | | | | | | 1 |
| ಪ್ರವರ್ಗ–1 | 1 | | | | | | | 1 |
| ಪ್ರ.–2(ಎ) | 2 | 2 | 1 | | | | | 5 |
| ಪ್ರ.–2(ಬಿ) | 1 | | | | | | | 1 |
| ಪ್ರ–3(ಎ) | 1 | | | | | | | 1 |
| ಪ್ರ.–3(ಬಿ) | 1 | | | | | | | 1 |
| ಸಾ.ಅ | 4 | 5 | 4 | 1 | 1 | | | 15 |
| ಒಟ್ಟು | 13 | 9 | 6 | 1 | 1 | | | 30 |

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ ಇಲಾಖೆ, ಬೆಂಗಳೂರು

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
|---|---|---|---|---|---|---|---|---|
| ಪ.ಜಾ | 1 | 2 | 2 | 1 | | 1 | 1 | 8 |
| ಪ.ಪಂ | 1 | 1 | | | | | | 2 |
| ಪ್ರ–.1 | | 1 | 1 | | | | | 2 |
| ಪ್ರ.–2(ಎ) | 1 | 2 | 1 | 1 | | 1 | 1 | 7 |
| ಪ್ರ.–2(ಬಿ) | | 1 | 1 | | | | | 2 |
| ಪ್ರ–3(ಎ) | | 1 | 1 | | | | | 2 |
| ಪ್ರ.–3(ಬಿ) | 1 | | 1 | | | | | 2 |
| ಸಾ.ಅ | 5 | 8 | 6 | 2 | 2 | 1 | 1 | 25 |
| ಒಟ್ಟು. | 9 | 16 | 13 | 4 | 2 | 3 | 3 | 50 |

ಆಯುಕ್ತರು, ಕಾರ್ಮಿಕ ಇಲಾಖೆ, ಬೆಂಗಳೂರು

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
|---|---|---|---|---|---|---|---|---|
| ಪ.ಜಾ | 2 | 2 | 1 | | | | | 5 |
| ಪ.ಪಂ | 1 | | | | | | | 1 |
| ಪ್ರವರ್ಗ–1 | 1 | | | | | | | 1 |
| ಪ್ರ.–2(ಎ) | 2 | 1 | 1 | | | | | 4 |

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
|---|---|---|---|---|---|---|---|---|
| ಪ್ರ.–2(ಬಿ) | 1 | | | | | | | 1 |
| ಪ್ರ–3(ಎ) | 1 | | | | | | | 1 |
| ಪ್ರ.–3(ಬಿ) | 1 | | | | | | | 1 |
| ಸಾ.ಅ | 4 | 4 | 4 | 1 | 1 | | | 14 |
| ಒಟ್ಟು. | 13 | 7 | 6 | 1 | 1 | | | 28 |

ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
|---|---|---|---|---|---|---|---|---|
| ಪ.ಜಾ | 1 | | | | | | | 1 |
| ಪ.ಪಂ | 1 | | | | | | | 1 |
| ಪ್ರವರ್ಗ–1 | 1 | | | | | | | 1 |
| ಪ್ರ.–2(ಎ) | 1 | | | | | | | 1 |
| ಸಾ.ಅ | 1 | 1 | 1 | | | | | 3 |
| ಒಟ್ಟು | 5 | 1 | 1 | | | | | 7 |

| ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | | | 1 | | | | | 1 |
| ಪ್ರವರ್ಗ–1 | | 1 | | | | | | 1 |
| ಪ್ರ.–2(ಎ) | | 1 | | | | | | 1 |
| ಸಾ.ಅ | | 1 | 1 | | 1 | | | 3 |
| ಒಟ್ಟು. | | 3 | 2 | | 1 | | | 6 |
| ಪದವಿಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು | | | | | | | | |
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 3 | 3 | 3 | | | | | 9 |
| **ಪ.ಪಂ** | 1 | 1 | | | | | | **2** |
| **ಪ್ರವರ್ಗ–1** | 1 | 1 | 1 | | | | | **3** |
| **ಪ್ರ.–2(ಎ)** | 3 | 3 | 3 | | | | | **9** |
| **ಪ್ರ.–2(ಬಿ)** | 1 | 1 | | | | | | **2** |
| **ಪ್ರ–3(ಎ)** | 1 | 1 | | | | | | **2** |
| **ಪ್ರ.–3(ಬಿ)** | 1 | 1 | | | | | | **2** |
| **ಸಾ.ಅ** | 7 | 9 | 8 | 2 | 1 | 1 | 1 | **29** |
| **ಒಟ್ಟು.** | **18** | **20** | **15** | **2** | **1** | **1** | **1** | **58** |

| ನೋಂದಣಿ ಮತ್ತು ಮುದ್ರಾಂಕ ಇಲಾಖೆ, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 1 | 1 | 1 | | | | | 3 |
| ಪ.ಪಂ | | 1 | | | | | | 1 |
| ಪ್ರ.–2(ಎ) | 1 | 1 | 1 | | | | | 3 |
| ಪ್ರ–3(ಎ) | | 1 | | | | | | 1 |
| ಪ್ರ.–3(ಬಿ) | | 1 | | | | | | 1 |
| ಸಾ.ಅ | 2 | 3 | 2 | 1 | | | 1 | 9 |
| ಒಟ್ಟು. | 4 | 8 | 4 | 1 | | | 1 | 18 |

| ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ್ರ.–2(ಎ) | | 1 | | | | | | 1 |
| ಸಾ.ಅ | | | 1 | | | | | 1 |
| ಒಟ್ಟು | | 1 | 1 | | | | | 2 |

| ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | | 1 | | | | | | 1 |
| ಪ್ರ.–2(ಎ) | | 1 | | | | | | 1 |
| ಪ್ರ–3(ಎ) | 1 | | | | | | | 1 |
| ಸಾ.ಅ | 1 | 1 | 1 | | | | | 3 |
| ಒಟ್ಟು | 2 | 3 | 1 | | | | | 6 |

| ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ್ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ್ರ.–2(ಬಿ) | 1 | | | | | | | 1 |
| ಸಾ.ಅ | 1 | | | | | | | 1 |
| ಒಟ್ಟು | 2 | | | | | | | 2 |

| ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 1 | | | | | | | 1 |
| ಪ.ಪಂ. | 1 | | | | | | | 1 |
| ಸಾ.ಅ | 1 | 1 | | | | | | 2 |
| ಒಟ್ಟು | 3 | 1 | | | | | | 4 |

| ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ. | | 1 | | | | | | 1 |
| ಸಾ.ಅ | | 1 | | | | | | 1 |
| ಒಟ್ಟು | | 2 | | | | | | 2 |

| ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ್ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ. | | 1 | | | | | | 1 |
| ಸಾ.ಅ | | 1 | | | | | | 1 |
| ಒಟ್ಟು | | 2 | | | | | | 2 |

| ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ್ರ.–2(ಎ) | 1 | | | | | | | 1 |
| ಸಾ.ಅ | | | 1 | | | | | 1 |
| ಒಟ್ಟು | 1 | | 1 | | | | | 2 |

| ಕೃಷಿ ಇಲಾಖೆ, ಬೆಂಗಳೂರು | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ. | 2 | 2 | 1 | 1 | | | | 6 |
| ಪ.ಪಂ. | | | 1 | | | | | 1 |
| ಪ್ರ–1 | 1 | | 1 | | | | | 2 |
| ಪ್ರ.–2(ಎ) | 2 | 2 | 1 | 1 | | | | 6 |
| ಪ್ರ–2(ಬಿ) | | | 1 | | | | | 1 |
| ಪ್ರ–3(ಎ) | | 1 | 1 | | | | | 2 |
| ಪ್ರ–3(ಬಿ) | | 1 | 1 | | | | | 2 |
| ಸಾ.ಅ | 4 | 6 | 5 | 2 | 1 | 1 | 1 | 20 |
| ಒಟ್ಟು | 9 | 12 | 12 | 4 | 1 | 1 | 1 | 40 |

## ಅನುಬಂಧ–5

### ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ನೇಮಕಾತಿಗೆ ಸಂಬಂಧಿಸಿದ ಇಲಾಖಾವಾರು ಹುದ್ದೆಗಳ ಪಟ್ಟಿ

| ಕ್ರಮ ಸಂಖ್ಯೆ | ಇಲಾಖೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಸಾರ್ವಜನಿಕ ಶಿಕ್ಷಣ ಇಲಾಖೆ | 1242 |
| 2 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ | 07 |
| 3 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ | 90 |
| 4 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ | 13 |
| 5 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಾವಣಗೆರೆ | 04 |
| 6 | ಎನ್.ಸಿ.ಸಿ. ನಿರ್ದೇಶನಾಲಯ (ರಾಜ್ಯ ಕೋಶ) | 04 |
| 7 | ಕೈಮಗ್ಗ ಮತ್ತು ಜವಳಿ ಇಲಾಖೆ | 06 |
| 8 | ಆಡಳಿತ ತರಬೇತಿ ಸಂಸ್ಥೆ, ಮೈಸೂರು | 10 |
| 9 | ನೋಂದಣಿ ಮತ್ತು ಮುದ್ರಾಂಕ ಇಲಾಖೆ | 92 |
| 10 | ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು | 100 |
| 11 | ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, ಬೆಂಗಳೂರು | 01 |
| 12 | ಕಾರಾಗೃಹ'ಗಳ ಇಲಾಖೆ, ಬೆಂಗಳೂರು | 03 |
| 13 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ | 11 |
| 14 | ಕರ್ನಾಟಕ ಲೋಕಾಯುಕ್ತ, ಬೆಂಗಳೂರು | 09 |
| 15 | ಆಯುಷ್ ನಿರ್ದೇಶನಾಲಯ, ಬೆಂಗಳೂರು | 07 |
| 16 | ವಾರ್ತಾ ಇಲಾಖೆ, ಬೆಂಗಳೂರು | 01 |
| 17 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ | 14 |
| 18 | ಪ್ರವಾಸೋದ್ಯಮ ಇಲಾಖೆ, ಬೆಂಗಳೂರು | 02 |
| 19 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಉಡುಪಿ | 07 |
| 20 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ್ | 14 |
| 21 | ಕಾಲೇಜು ಶಿಕ್ಷಣ ಇಲಾಖೆ | 24 |
| 22 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು | 06 |
| 23 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಯಚೂರು | 08 |
| 24 | ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು | 10 |
| 25 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು | 02 |
| | ಒಟ್ಟು | 1687 |

| ಸಾರ್ವಜನಿಕ ಶಿಕ್ಷಣ ಇಲಾಖೆ | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ಅ | ಅಂ.ವಿ | ಒಟ್ಟು |
| ಪ.ಜಾ | 39 | 56 | 47 | 18 | 9 | 9 | 9 | **187** |
| ಪ.ಪಂ | 8 | 12 | 10 | 3 | 2 | 2 | 1 | **38** |
| ಪ್ರವರ್ಗ–1 | 11 | 15 | 13 | 5 | 2 | 2 | 2 | **50** |
| ಪ್ರ–2(ಎ) | 38 | 56 | 47 | 18 | 9 | 9 | 9 | **186** |
| ಪ್ರ–2(ಬಿ) | 11 | 15 | 13 | 5 | 2 | 2 | 2 | **50** |
| ಪ್ರ–3(ಎ) | 11 | 15 | 13 | 4 | 2 | 2 | 2 | **49** |
| ಪ್ರ–3(ಬಿ) | 13 | 18 | 15 | 6 | 3 | 3 | 3 | **61** |
| ಸಾ.ಅ | 125 | 186 | 155 | 62 | 31 | 31 | 31 | **621** |
| **ಒಟ್ಟು** | **256** | **373** | **313** | **121** | **60** | **60** | **59** | 1242 |

ಸ್ವೀಕರಿಸುತ್ತಾರೆ. ಆ ಟೆಂಡರುಗಳನ್ನು ಈ ಕೆಳಗೆ ಸಹಿ ಮಾಡಿರುವವರ ಕಚೇರಿಯಲ್ಲಿ ದಿನಾಂಕ: 18.12.2007 ರಂದು ಸಂಜೆ 4-30 ಗಂಟೆಗೆ ಸಾಧ್ಯವಾದರೆ ತೆರೆಯಲಾಗುವುದು.

ಕಾಮಗಾರಿಗೆ : ಪ್ರತಿಯೊಂದು ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ಕರಾರು ದಸ್ತಾವೇಜುಗಳು ಅಂದರೆ ರೇಖಾ ಚಿತ್ರಗಳು ಪೂರ್ಣ ತಂಡ ಮಾಡಬೇಕಾದ ಕಾಮಗಾರಿಗಳ ಪೂರ್ಣ ತಪಶೀಲು ಮಾಡಬೇಕಾದ ಕಾಮಗಾರಿಗಳ ವಿವಿಧ ವರ್ಗಗಳ ಪರಿಮಾಣದ ಷೆಡ್ಯೂಲ್ ಅಗತ್ಯವಿರುವಲ್ಲಿ ಕಲ್ಲುಗಣಿ ಚಾರ್ಟುಗಳು ಮತ್ತು ಯಾರ ಟೆಂಡರು ಸ್ವೀಕೃತವಾಗುತ್ತದೋ ಆ ವ್ಯಕ್ತಿಯು ಮಾಡಬೇಕಾದ ಕರಾರಿನ ಷರತ್ತುಗಳು ಇವುಗಳನ್ನು ಅದಕ್ಕಾಗಿ ಅರ್ಜಿ ಸಲ್ಲಿಸಿ ಟೆಂಡರ್ ದಾಖಲೆಗಳ ಬಿಲ್ಲನ್ನು ಸಂದಾಯ ಮಾಡಿದ ತರುವಾಯ ಅವುಗಳಲ್ಲಿ ಕಾಮಗಾರಿಯ ಎದುರು ಹೇಳಲಾದ ದಿನಾಂಕದಂದು ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಖರೀದಿಸಬಹುದು. ಇದಲ್ಲದೇ ಕರಾರುದಾರರು ಸಧ್ಯದಲ್ಲಿ ತಾವು ಕಾರ್ಯನಿರ್ವಹಿಸುತ್ತಿರುವಂತಹ ಕಾಮಗಾರಿಗಳ ಒಂದು ಪಟ್ಟಿಯನ್ನು ಈ ಕೆಳಗೆ ಸಹಿ ಹಾಕಿದವರ ಮಾಹಿತಿಗಾಗಿ ಸಲ್ಲಿಸಬೇಕೆಂದು ಕೋರಲಾಗಿದೆ.

ಟೆಂಡರು ಸಲ್ಲಿಸಬಯಸುವ ಕರಾರುದಾರರು ಟೆಂಡರ್ ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಒಳಗೊಂಡ ವಿವರವಾದ ಸೂಚನೆಗಳು ಮತ್ತು ಷರತ್ತುಗಳನ್ನು ತಪ್ಪದೇ ಪಾಲಿಸಬೇಕೆಂಬುದನ್ನು ಗಮನಿಸಬೇಕು. ಇದರ ನೋಟೀಸು ಅವರು ಕೊಂಡುಕೊಳ್ಳುವ ಟೆಂಡರ್ ದಾಖಲೆಗಳ ಒಂದು ಭಾಗವಾಗಿರುತ್ತದೆ. ಸಂಚಕಾರ ಠೇವಣಿಯ ಮೊಬಲಗು, ನಮೂನೆ ಹಾಗೂ ಸಿಂಧುತ್ವ ಅವಧಿಯ ಸಂಬಂಧಪಟ್ಟ ವಿವರಗಳು ಟೆಂಡರ್‌ಗಳನ್ನು ಸಲ್ಲಿಸುವಾಗ ಮತ್ತು ಟೆಂಡರು ದಸ್ತಾವೇಜುಗಳನ್ನು ಭರ್ತಿ ಮಾಡುವಾಗ ಕರಾರುದಾರರು ಅನುಸರಿಸಬೇಕಾದ ಕಾರ್ಯವಿಧಾನ, ನೀಡಿಕೆ ಆಹ್ವಾನದ ಅವಧಿಯ ಸಿಂಧುತ್ವ, ಟೆಂಡರುಗಳನ್ನು ತೆಗೆಯುವುದು, ತಪ್ಪುಗಳನ್ನು ದೋಷಗಳನ್ನು ಸರಿಪಡಿಸುವಿಕೆ ಕೆಲವು ಸಂದರ್ಭಗಳಲ್ಲಿ ಮೌಲ್ಯ ನಿರ್ಧರಣೆ ಪದ್ಧತಿ, ಕರಾರುದಾರರು ಬಾಕಿದಾರರಾದಾಗ ಪರಿಣಾಮಗಳು ಯಶಸ್ವಿ ಟೆಂಡರುದಾರರಿಂದ ಸಂದಾಯ ಮಾಡಬೇಕಾದ ಭದ್ರತಾ ಠೇವಣಿ ಬೆಲೆ ಹೊಂದಾಣಿಕೆ ಇತ್ಯಾದಿಗಳು ಸಹಾ ಟೆಂಡರು ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಲಭ್ಯವಿರುತ್ತದೆ.

ಕರಾರುದಾರರಿಗೆ ಹೆಚ್ಚಿನ ವಿವರಗಳೇನಾದರೂ ಅಗತ್ಯವಿದ್ದಲ್ಲಿ ಅದನ್ನು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿಯಿಂದ ನಮೂದಿಸಿರುವ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು. ಈ ಕೆಳಗೆ ನಮೂದಿಸಲಾದ ಯಾವುದೇ ದಿನಾಂಕಗಳು ಸಾರ್ವತ್ರಿಕ ರಜಾ ದಿನಗಳಾಗಿರುವಲ್ಲಿ ಆ ದಿನಾಂಕಕ್ಕೆ ಬದಲಾಗಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದೆಂದು ಸೂಚಿಸಲಾಗಿದೆ.

**ಸೂಚನೆ:**

1) ಇ.ಎಂ.ಡಿ.ಯನ್ನು ಕರ್ನಾಟಕ ಸರ್ಕಾರದ ಟ್ರೆಜರಿ ಚಲನ್, ಡಿಮ್ಯಾಂಡ್ ಡ್ರಾಫ್ಟ್, ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟ್ ರೂಪದಲ್ಲಿ ಸೂಚಿಸಿರುವ ಹಣಕ್ಕೆ ತಕ್ಕಂತೆ ಕಾರ್ಯನಿರ್ವಾಹಕ ಇಂಜಿನಿಯರ್, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ, ಇವರ ಹೆಸರಿನಲ್ಲಿ ಪಾವತಿ ಮಾಡುವುದು.
2) ಯಾವುದೇ ನಿಬಂಧನೆಗಳನ್ನೊಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
3) ಠೇವಣಿ ಕ್ರಮಬದ್ಧತೆಯ (ವ್ಯಾಲಿಡಿಟಿ ಪೀರಿಯಡ್) ತೊಂಬತ್ತು ದಿವಸಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
4) ಅಂದಾಜು ಮೊತ್ತ ಹೆಚ್ಚುವರಿಯಾದಲ್ಲಿ ಇ.ಎಂ.ಡಿ. ವ್ಯತ್ಯಾಸದ ಮೊತ್ತವನ್ನು ಯಶಸ್ವಿ ಟೆಂಡರುದಾರರು ಕರಾರು ಮುಚ್ಚಳಿಕೆ ಸಮಯದಲ್ಲಿ ಪಾವತಿ ಮಾಡಬೇಕು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗಿಟ್ಟ ಮೊತ್ತ ರೂ. ಲಕ್ಷಗಳಲ್ಲಿ | ಇ.ಎಂ.ಡಿ . ರೂ. | ಟೆಂಡರ್ ದಾಖಲೆಗಳ ವೆಚ್ಚ (ಈ ಹಣವನ್ನು ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ) ಎಲ್ಲಾ ತೆರಿಗೆಗಳು ಸೇರಿ (ರೂ.ಗಳಲ್ಲಿ) | ಕರಾರುದಾರರ ವರ್ಗ | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು | ಸಂಜೆ 5.30 ವರೆಗೆ ಅರ್ಜಿ ಸ್ವೀಕಾರದ ಕಡೆಯ ದಿನಾಂಕ | ಸಂಜೆ 5-30 ವರೆಗೆ ಟೆಂಡರ್ ದಾಖಲೆಗಳನ್ನು ನೀಡುವ ಕಡೆಯ ದಿನಾಂಕ | ಸಂಜೆ 4-00 ಗಂಟೆವರೆಗೆ ಟೆಂಡರ್‌ಗಳನ್ನು ಸ್ವೀಕರಿಸುವ ಕಡೆಯ ದಿನಾಂಕ |
|---|---|---|---|---|---|---|---|---|---|
| 1. | ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ತಾ: ಚಿಂತಾಮಣಿ-ಮುರುಗಮಲ್ಲ-ಯನುಮಲಪಾಡಿ ರಸ್ತೆಯ ಸರಪಳಿ 21.00 ರಿಂದ 23.00 ಕಿಮೀವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ. | 10.00 | 15000.00 | ರೂ. 1500.00 ಎಲ್ಲಾ ತೆರಿಗೆಗಳು ಸೇರಿ | 2ನೇ ದರ್ಜೆ ಮತ್ತು ಮೇಲ್ಪಟ್ಟು | 3 ತಿಂಗಳು | 26.11.2007 ರಿಂದ 17.12.2007 | 26.11.2007 ರಿಂದ 17.12.2007 | 18.12.2007 |

**A) ಟೆಂಡರ್ ಫಾರಂಗಳಿಗಾಗಿ ಮನವಿ ಸಲ್ಲಿಸುವ ಗುತ್ತಿಗೆದಾರರು ತಮ್ಮ ಅರ್ಜಿಯೊಂದಿಗೆ ಈ ಕೆಳಕಂಡ ಮಾಹಿತಿಯನ್ನು ಹಾಜರುಪಡಿಸಬೇಕು, ಹಾಜರುಪಡಿಸಲು ವಿಫಲರಾದಲ್ಲಿ ಅಂತಹ ಗುತ್ತಿಗೆದಾರರ ಅರ್ಜಿಗಳನ್ನು (ಮನವಿಯನ್ನು) ನೇರವಾಗಿ ನಿರಾಕರಿಸಲಾಗುವುದು.**

1. ನಿಗದಿತ ಇ.ಎಂ.ಡಿ. ಯನ್ನು ಈ ಕೆಳಗೆ ಸೂಚಿಸಿರುವವರಿಗೆ ಡಿಮ್ಯಾಂಡ್ ಡ್ರಾಫ್ಟ್ ದ್ವಿಪ್ರತಿಯಲ್ಲಿ ಟ್ರೆಜರಿ ಚಲನನ್ನು ಅಥವಾ ಎನ್.ಎಸ್.ಸಿ. ಬ್ಯಾಂಕ್ ಗ್ಯಾರಂಟಿಗಳನ್ನು ಈ ಕೆಳಗೆ ಸಹಿ ಮಾಡಿರುವವರಿಗೆ ಪಾವತಿಯಾಗುವಂತೆ ಪ್ಲೆಡ್ಜ್ ಮಾಡಿ ಟೆಂಡರ್‌ನೊಂದಿಗೆ ಸಲ್ಲಿಸುವುದು ಹಾಗೆ ಮಾಡಲು ತಪ್ಪಿದಲ್ಲಿ ಟೆಂಡರ್ ಅನ್ನು ತಿರಸ್ಕರಿಸಲಾಗುವುದು.
2. ಗುತ್ತಿಗೆದಾರರು ನೊಂದಾಣಿ ಮತ್ತು ನವೀಕರಣ ಪ್ರಮಾಣ ಪತ್ರದ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಯಿಂದ ಕ್ರಮವಾಗಿ ಪ್ರಮಾಣೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

3. ಗುತ್ತಿಗೆದಾರರು ನಿರ್ವಹಿಸಿ ತೃಪ್ತಿಕರವಾಗಿ ಪೂರ್ಣಗೊಳಿಸಿರುವ ಕಾಮಗಾರಿಗಳ ಯೋಗ್ಯತಾ ಪ್ರಮಾಣ ಪತ್ರವನ್ನು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್‌ರವರಿಂದ ದೃಢೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

**C) ಸೂಚನೆ:**

1. ಯಾವ ಕಾರಣವನ್ನು ಸಹಾ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.
2. ಟೆಂಡರ್ ಫಾರಂಗಳನ್ನು ನೀಡುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕವನ್ನು ತಂದು ಅದರಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ಇಲ್ಲದಿದ್ದರೆ ಟೆಂಡರ್ ಫಾರಂಗಳಿಗಾಗಿ ಹಣ ಪಾವತಿ ಮಾಡಿದ್ದರೂ ಸಹಾ ಟೆಂಡರ್ ಫಾರಂಗಳನ್ನು ನೀಡುವುದಿಲ್ಲ ಹಾಗೂ ಟೆಂಡರ್ ಫಾರಂ ಬೆಲೆಯನ್ನು ಹಿಂದಿರುಗಿಸುವುದಿಲ್ಲ.
3. ಭರ್ತಿ ಮಾಡಲ್ಪಟ್ಟ ಟೆಂಡರ್ ನಮೂನೆಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕದಲ್ಲಿ ಸಂಬಂಧಪಟ್ಟವರಿಂದ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ಇಲ್ಲದ ಪಕ್ಷದಲ್ಲಿ ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕಲು ಅವಕಾಶ ನೀಡುವುದಿಲ್ಲ.

ಸದರಿ ವಿಷಯದಲ್ಲಿ ಹೆಚ್ಚಿನ ವಿಷಯಗಳಿಗೆ ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಲು ಕೋರಿದೆ.

ಕಾರ್ಯನಿರ್ವಾಹಕ ಇಂಜಿನಿಯರ್,

ಪಿ.ಆರ್. 748 ಲೋಕೋಪಯೋಗಿ ಇಲಾಖೆ ವಿಭಾಗ, ಚಿಕ್ಕಬಳ್ಳಾಪುರ.

**ಕಾರ್ಯಕಾರಿ ಅಭಿಯಂತರರ ಕಛೇರಿ, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಉಡುಪಿ ವಿಭಾಗ, ಉಡುಪಿ (ಲೋ.ಇ ಉಡುಪಿ ವಿಭಾಗ, ಉಡುಪಿ)**

**ಟೆಂಡರು ಪ್ರಕಟಣೆ**

**ನಂ./ಜಿ.ಎನ್.ಎಲ್./ಎನ್.ಐ.ಟಿ./ಯು.ಡಿ.ಎನ್./2007-2008/ಜೇಇ ದಿನಾಂಕ: 15ನೇ ನವೆಂಬರ್ 2007**

ಈ ಕೆಳಗೆ ಸೂಚಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಸ್ಪರೆನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್‌ಮೆಂಟ್ ಆ್ಯಕ್ಟ್ 2000ದ ಪ್ರಕಾರ "ದ್ವಿ ಲಕೋಟೆ ಪದ್ಧತಿಯಲ್ಲಿ" ಮೊಹರಾದ ಐಟಂವಾರು ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಲಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ (ಫೈನಾನ್ಸಿಯಲ್) ಬಿಡ್ಡನ್ನು ಒಳಗೊಂಡಿದೆ. ಬಿಡ್ಡುಗಳನ್ನು, ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್ ಎಂದು ಗುರುತು ಹಾಕಿದ ಎರಡು ಪ್ರತ್ಯೇಕ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಈ ಎರಡು ಲಕೋಟೆಗಳಿಗೆ ಮೊಹರು ಮಾಡಿ ಕೆಲಸದ ಶಿರೋನಾಮೆ ನಮೂದಿಸಿ ಇನ್ನೊಂದು ಮೊಹರಾದ ಲಕೋಟೆಯಲ್ಲಿಡಬೇಕು ಮತ್ತು ಬಿಡ್ಡುದಾರರ ಹೆಸರು ಹಾಗೂ ಪೂರ್ತಿ ಅಂಚೆ ವಿಳಾಸದೊಂದಿಗೆ ಸಲ್ಲಿಸತಕ್ಕದ್ದು. ಪೂರ್ತಿಗೊಳಿಸಿದ ಬಿಡ್ಡನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ "ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ 2ರ ಫಾರಂನಲ್ಲಿ ಪಿಡಬ್ಲ್ಯೂಜಿ 65 ಹಾಗೂ 66 ರಲ್ಲಿ" ಹಾಗೂ "ಕರ್ನಾಟಕ ಟ್ರಾನ್ಸ್‌ಸ್ಪರೆನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್‌ಮೆಂಟ್ ಆ್ಯಕ್ಟ್ 2000" ದಲ್ಲಿ ನಿರೂಪಿತ ಶರ್ತಗೊಳಪಟ್ಟಿದ್ದು ದಿನಾಂಕ:21.12.2007 ರಂದು ಸಂಜೆ 4.00 ಗಂಟೆಯವರೆಗೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, (ಲೋ.ಇ. ಉಡುಪಿ ವಿಭಾಗ, ಉಡುಪಿ) ಇವರು ಸ್ವೀಕರಿಸುವರು. ತಾಂತ್ರಿಕ ಬಿಡ್ಡನ್ನು ಸಾಧ್ಯವಾದಲ್ಲಿ ಅದೇ ದಿನ ತೆರೆಯಲಾಗುವುದು. ತಾಂತ್ರಿಕ ಬಿಡ್ಡನಲ್ಲಿ ಅರ್ಹರಾದ ಬಿಡ್‌ದಾರರ ವಿತ್ತೀಯ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು.

ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ದಿನಾಂಕ: 20.12.2007 ರವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಶನನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 20.12.2007 ರವರೆಗೆ ನೀಡಲಾಗುವುದು.

**ಲೆಕ್ಕ ಶೀರ್ಷಿಕೆ:- 4216 - ವಸತಿನಿಲಯ ಕಟ್ಟಡ**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಗಳಲ್ಲಿ) | ಇಎಂಡಿ (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲ ಹೊರತು) | ಟೆಂಡರ್ ನಮೂನೆ | ಟೆಂಡರ್ ಶೆಡ್ಯೂಲ್ ಬೆಲೆ (ತೆರಿಗೆ ಸೇರಿ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1. | ಕಾರ್ಕಳದಲ್ಲಿ ಅಗ್ನಿಶಾಮಕ ಸಿಬ್ಬಂದಿಯವರಿಗೆ ವಸತಿಗೃಹ ನಿರ್ಮಾಣ | 67,06,000.00 | 67100.00 | 9 ತಿಂಗಳು | ದರವಾರು | 7,550/- | 1ನೇ ದರ್ಜೆ |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಗಳಲ್ಲಿ) | ಇಎಂಡಿ (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲ ಹೊರತು) | ಟೆಂಡರ್ ನಮೂನೆ | ಟೆಂಡರ್ ಶೆಡ್ಯೂಲ್ ಬೆಲೆ (ತೆರಿಗೆ ಸೇರಿ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 2. | ಉಡುಪಿಯಲ್ಲಿ ಲೋಕೋಪಯೋಗಿ ಇಲಾಖಾ ಶಾಖಾಧಿಕಾರಿಗಳಿಗೆ ವಸತಿಗೃಹ ನಿರ್ಮಾಣ. | 51,15,500.00 | 51200.00 | 9 ತಿಂಗಳು | ದರವಾರು | 5,850/- | 1ನೇ ದರ್ಜೆ |

**ಸಾಮಾನ್ಯ ನಿಯಮಗಳು:**

1) ಟೆಂಡರಿನಲ್ಲಿ ಭಾಗವಹಿಸಲಿಚ್ಚಿಸುವ ಗುತ್ತಿಗೆದಾರರು ಉದ್ದೇಶಿಸಿರುವ ಕಾಮಗಾರಿಯ ಶೇ. 30ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2) ಕಾಮಗಾರಿ ನಿರ್ವಹಿಸುವರೇ, ಬೇಕಾದ ಆರ್ಥಿಕ ಸಾಮರ್ಥ್ಯ ಹೊಂದಿರುವರೇ ಎನ್ನುವ ಬಗ್ಗೆ ಟೆಂಡರ್ ಮೊಬಲಗಿನ ಶೇ. 30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ) Line of Credit ತಪ್ಪದೆ ನೀಡಬೇಕು.
3) ತಾಂತ್ರಿಕ ಬಿಡ್‌ಗಳ ಪುರಾವೆಯಾಗಿ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಗೆಜೆಟೆಡ್ ಅಧಿಕಾರಿಯವರಿಂದ / ನೋಟರಿಯವರಿಂದ ದೃಢೀಕರಿಸಿ ಸಲ್ಲಿಸಬೇಕು. ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಹಂತದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತದೆ.
4) ಗುತ್ತಿಗೆದಾರರು ಉಕ್ಕು, ಸಿಮೆಂಟು, ಯಂತ್ರೋಪಕರಣ & ಸಾಧನ ಸಲಕರಣೆ, ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಗ್ರಿಗಳ ಸಂಗ್ರಹಕ್ಕೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S.) ಗುಣ ಮಟ್ಟಕ್ಕೆ ಸರಿಹೊಂದುವಂತಿರಬೇಕು. ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.
5) ಇಎಂಡಿಯನ್ನು ರಾಷ್ಟ್ರೀಕೃತ ಯಾ ಷೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್./ ಕಾಲ್‌ಡಿಪೋಸಿಟ್, ಡಿಡಿ, ಬ್ಯಾಂಕಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿಯನ್ನು ಕೆಳಸಹಿದಾರರ ಹೆಸರಿಗೆ ಪ್ಲಜ್ ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
6) ಕಾಮಗಾರಿಯನ್ನು ಕೈಗೆತ್ತಿಕೊಳ್ಳುವ ಗುತ್ತಿಗೆದಾರರಿಂದ ಶೇ. 1 ರಷ್ಟು "ಕಾರ್ಮಿಕ ಕಲ್ಯಾಣ ಸುಂಕ" ಕಡಿತಗೊಳಿಸಲಾಗುವುದು. ಅಲ್ಲದೆ ಸದ್ರಿ ಕಾಯ್ದೆ / ಆದೇಶಗಳಿಗೆ ಅನುಗುಣವಾಗಿ ಸುಂಕವನ್ನು ಗಣನೆಗೆ ತೆಗೆದುಕೊಂಡು ಟೆಂಡರ್ ದರ ನಮೂದಿಸತಕ್ಕದೆಂದು ತಿಳಿಯಪಡಿಸಲಾಗಿದೆ.

**ಯಂತ್ರೋಪಕರಣಗಳ ವಿವರಗಳು**

| ಕ್ರ. ಸಂ. | ಯಂತ್ರೋಪಕರಣಗಳ ಹೆಸರು | ಪರಿಮಾಣ |
|---|---|---|
| 1 | **ಸೆಂಟ್ರಿಂಗ್ ಸಾಮಾಗ್ರಿಗಳು** | |
| 1 | ಅ) ಫಾರ್ಮವರ್ಕ್ ಸಾಮಾಗ್ರಿಗಳು (Formwork materials) | 1000 Sqm |
| | ಆ) ಸೆಂಟ್ರಿಂಗ್ ಸ್ಟೀಲ್ ಶೀಟ್‌ಗಳು (Centring steel sheets of different sizes) | 1500 Sqm |
| 2 | **ಯಂತ್ರೋಪಕರಣಗಳು:-** | |
| | ಅ) ಟಿಪ್ಪರ್‌ಗಳು (Tippers) | 2 ಸಂ |
| | ಆ) ಏರ್-ಕಂಪ್ರೆಸರ್ (Air-Compressor) | 1 ಸಂ |
| | ಇ) ನೀರಿನ ತೊಟ್ಟಿಗಳು (Water tankers) (5000 LTRS) | 1 ಸಂ |
| | ಈ) ಪಂಪುಗಳು (2 HP) | 1 ಸಂ |
| | ಉ) ಜನರೇಟರ್ಸ್ (5 KV) | 1 ಸಂ |
| | ಊ) ವೈಬ್ರೇಟರ್ಸ್ (Vibrators) | 2 ಸಂ |
| | ಋ) ಕಾಂಕ್ರೀಟ್ ಮೆಷಿನ್ ಮಿಕ್ಸರ್ (Concrete Machine Mixer) | 2 ಸಂ |
| | ೠ) ಎಕ್ಸ್‌ಕವೇಟರ್ (Poclain / Excavator) | 1 ಸಂ |

ಸದರಿ ಯಂತ್ರೋಪಕರಣಗಳ ಮಾಲಿಕತ್ವದ ಬಗ್ಗೆ (ಸ್ವಂತ / ಬಾಡಿಗೆ) ದಾಖಲೆಗಳನ್ನು ಕಡ್ಡಾಯವಾಗಿ ಬಿಡ್ಡುದಾರರು ಒದಗಿಸುವುದು. ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯನ್ನು ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರರು,
ಲೋಕೋಪಯೋಗಿ ವಿಭಾಗ ಉಡುಪಿ.

ಪಿ.ಆರ್. 754

**ವಾರ್ತಾ ಇಲಾಖೆ**

**2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಶಿವಾಜಿನಗರ ಬಸ್ ನಿಲ್ದಾಣ, ಬೆಂಗಳೂರು 560 051.**

**ಸಂ: ವಾಇ/ಸಿಬ್ಬಂದಿ/ಟೆಂಡರ್/2007–08/15423–28, ದಿನಾಂಕ 11ನೇ ಡಿಸೆಂಬರ್ 2007**

**ಕಚೇರಿ ಕಟ್ಟಡದ ಒಳಾಂಗಣ ಕೆಲಸಗಳಿಗಾಗಿ ಮರು ಅಲ್ಪಾವಧಿ ಟೆಂಡರ್**

ಬೆಂಗಳೂರಿನ ನಂ 17, ಇನ್‌ಫೆಂಟ್ರಿ ರಸ್ತೆಯಲ್ಲಿ ನೂತನವಾಗಿ ನಿರ್ಮಿಸಿರುವ "ವಾರ್ತಾ ಸೌಧ"ದಲ್ಲಿ ಒಳಾಂಗಣ ಕೆಲಸಗಳಾದ ಮಾಡ್ಯುಲರ್ ವರ್ಕ್ಸ್ ಸ್ಟೇಷನ್ ಸಜ್ಜುಗೊಳಿಸುವುದು (Modular Work station), ಮಾಡ್ಯುಲರ್ ಪೀಠೋಪಕರಣಗಳನ್ನು ವ್ಯವಸ್ಥೆಗೊಳಿಸುವುದು ಸೇರಿದಂತೆ ಇತರ ಬಿಡಿ ಭಾಗಗಳನ್ನೊಳಗೊಂಡ ಸಂಬಂಧಿತ ಕೆಲಸಗಳನ್ನು ಕೈಗೊಳ್ಳಲು ಈ ಕ್ಷೇತ್ರದಲ್ಲಿ ಅನುಭವ ಹೊಂದಿದ ಬೃಹತ್ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿದ ನೊಂದಾಯಿತ ಒಳಾಂಗಣ ಕಾರ್ಯ ನಿರ್ವಾಹಕರು ಹಾಗೂ ಗುತ್ತಿಗೆದಾರರಿಂದ ಎರಡು ಲಕೋಟೆ (ತಾಂತ್ರಿಕ ಮತ್ತು ಆರ್ಥಿಕ) ಪದ್ಧತಿಯಲ್ಲಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಕೆಲಸಗಳ ವಿವರ ಇಂತಿದೆ;

| ಕ್ರ. ಸಂ | ಕೆಲಸದ ಹೆಸರು | ಟೆಂಡರ್‌ಗಿಟ್ಟ ಅಂದಾಜು ಮೊತ್ತ | ಕೆಲಸ ಮುಗಿಸಲು ಕಾಲಾವಧಿ | ಮುಂಗಡ ಠೇವಣಿ | ಖಾಲಿ ಟೆಂಡರ್ ಫಾರಂ ಬೆಲೆ |
|---|---|---|---|---|---|
| 1 | ಬೆಂಗಳೂರಿನ ನಂ. 17, ಇನ್‌ಫೆಂಟ್ರಿ ರಸ್ತೆಯಲ್ಲಿ ನೂತನವಾಗಿ ನಿರ್ಮಿಸಲಾಗಿರುವ "ವಾರ್ತಾಸೌಧ"ದಲ್ಲಿ ಮಾಡ್ಯುಲರ್ ವರ್ಕ್ಸ್ ಸ್ಟೇಷನ್ಸ್ ಒಳಾಂಗಣ ಬಿಡಿಭಾಗಗಳು ಹಾಗೂ ಮಾಡ್ಯುಲರ್ ಪೀಠೋಪಕರಣಗಳನ್ನು ಅಳವಡಿಸಿ, ಸಜ್ಜುಗೊಳಿಸುವುದು | ರೂ 1,27,49,115/– (ಒಂದು ಕೋಟಿ ಇಪ್ಪತ್ತೇಳು ಲಕ್ಷದ ನಲವತ್ತೊಂಬತ್ತು ಸಾವಿರದ ಒಂದು ನೂರ ಹದಿನೈದು ಮಾತ್ರ) | 4 ವಾರಗಳು | ರೂ 1,30,000/– | ರೂ 1000–00 ಡಿಡಿ ರೂಪದಲ್ಲಿ (ಹಿಂತಿರುಗಿಸ ಲಾಗದು) |

ಟೆಂಡರ್ ನಮೂನೆಗಳನ್ನು ವಾರ್ತಾ ಇಲಾಖೆಯ ಅಗತ್ಯಗಳನ್ನು ಪೂರೈಸುವ ಬಿಡ್‌ದಾರರಿಗೆ ಮಾತ್ರ ಅಂದರೆ ಈ ಕ್ಷೇತ್ರದಲ್ಲಿ ಅವರ ಹಿಂದಿನ ಕಾರ್ಯನಿರ್ವಹಣೆ, ತಾಂತ್ರಿಕ ಅರ್ಹತೆ, ಆರ್ಥಿಕ ಸಾಮರ್ಥ್ಯ, ಅನುಭವ ಇತ್ಯಾದಿ ಅಂಶಗಳನ್ನು ಆಧರಿಸಿ ನೀಡಲಾಗುವುದು. ಟೆಂಡರ್‌ದಾರರು ಈ ಸಂಬಂಧ ಅರ್ಹ ಪ್ರಾಧಿಕಾರದಿಂದ ಪಡೆದಿರುವ ಪ್ರಮಾಣಪತ್ರವನ್ನು ಲಗತ್ತಿಸಬೇಕು. (ಬಿಡ್‌ದಾರರು ಸಾರ್ವಜನಿಕ ಉದ್ಯಮ ಅಥವಾ ಬಹುರಾಷ್ಟ್ರೀಯ ಕಂಪನಿಗಳ ಪ್ರಮಾಣಪತ್ರಗಳನ್ನು ಸಹ ಲಗತ್ತಿಸಬಹುದು)

**ಷರತ್ತುಗಳು:**

1: ಕಳೆದ 2 ವರ್ಷಗಳಲ್ಲಿ ತಲಾ ರೂ 60.00 ಲಕ್ಷಗಳಿಗಿಂತಲೂ ಕಡಿಮೆ ಇಲ್ಲದಂತಹ ಇಂತಹದೇ ಕನಿಷ್ಟ ಎರಡು ಕಾಮಗಾರಿಗಳನ್ನು ನಿರ್ವಹಿಸಿರಬೇಕು.
ಅಥವಾ
ಕಳೆದ 2 ವರ್ಷಗಳಲ್ಲಿ ರೂ 90.00 ಲಕ್ಷಗಳ ಮೌಲ್ಯಕ್ಕಿಂತಲೂ ಕಡಿಮೆ ಇಲ್ಲದಂತಹ ಇಂತಹದೇ ಒಂದು ಕಾಮಗಾರಿಯನ್ನು ನಿರ್ವಹಿಸಿರಬೇಕು.

2: ದಿನಾಂಕ 31–3–2007ಕ್ಕೆ ಕೊನೆಗೊಂಡಂತೆ ಕಳೆದ ಮೂರು ಆರ್ಥಿಕ ವರ್ಷಗಳಲ್ಲಿ ಟೆಂಡರ್‌ದಾರರು ಸರಾಸರಿ ರೂ 200.00 ಲಕ್ಷಗಳಿಗಿಂತಲೂ ಕಡಿಮೆ ಇರದಂತೆ ವಾರ್ಷಿಕ ವಹಿವಾಟನ್ನು ನಡೆಸಿರಬೇಕು. ಈ ಬಗ್ಗೆ ಟೆಂಡರ್‌ದಾರರು ಚಾರ್ಟರ್ಡ್ ಅಕೌಂಟೆಂಟ್ ಅವರಿಂದ ಪಡೆದ ದೃಢೀಕರಣಪತ್ರ ಲಗತ್ತಿಸಬೇಕು.

ಟೆಂಡರ್ ಫಾರಂಗಳಿಗಾಗಿ ಗುತ್ತಿಗೆದಾರರ ಮನವಿ ಸ್ವೀಕರಿಸಲು ನಿಗದಿಗೊಳಿಸಿರುವ ಕೊನೆಯ ದಿನಾಂಕ 14.12.2007ರ ಸಂಜೆ 5.30 ಗಂಟೆಯವರೆಗೆ. ಖಾಲಿ ಟೆಂಡರ್ ಫಾರಂಗಳನ್ನು ಗುತ್ತಿಗೆದಾರರಿಗೆ ಅವರ ಅರ್ಜಿಗಳನ್ನು ಹಾಗೂ ಸ್ವವಿವರಗಳನ್ನು ಪರಿಶೀಲಿಸಿದ ನಂತರ ದಿನಾಂಕ 18–12–2007ರ ಸಂಜೆ 5.30 ಗಂಟೆಯವರೆಗೆ ನೀಡಲಾಗುವುದು. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ನಿಗದಿಗೊಳಿಸಿರುವ ಅಂತಿಮ ದಿನಾಂಕ 22–12–2007ರ ಸಂಜೆ 4.00 ಗಂಟೆಯವರೆಗೆ. ತಾಂತ್ರಿಕ ಬಿಡ್‌ಗಳನ್ನು ಸಾಧ್ಯವಾದ್ದಲ್ಲಿ ಅದೇ ದಿನ ಸಂಜೆ 4.30 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು ತಾಂತ್ರಿಕ ಬಿಡ್‌ಗಳಲ್ಲಿ ಅರ್ಹರಾದಂತಹ ಟೆಂಡರ್‌ದಾರರ ಆರ್ಥಿಕ ಬಿಡ್‌ಗಳನ್ನು ಮಾತ್ರ ದಿನಾಂಕ 26–12–2007ರಂದು ಬೆಳಿಗ್ಗೆ 11.30 ಗಂಟೆಗೆ ತೆರೆಯಲಾಗುವುದು. ಟೆಂಡರ್‌ದಾರರು / ಗುತ್ತಿಗೆದಾರರು ತಾಂತ್ರಿಕ ಮತ್ತು ಆರ್ಥಿಕ ಬಿಡ್‌ಗಳನ್ನು ಪ್ರತ್ಯೇಕ ಲಕೋಟೆಗಳಲ್ಲಿ ಸೀಲ್ ಮಾಡಿ, ಅವುಗಳನ್ನು ಇನ್ನೊಂದು ಲಕೋಟೆಯಲ್ಲಿ ಹಾಕಿ ಸೀಲ್ ಮಾಡಿ ಅದರ ಮೇಲೆ ಕೆಲಸದ ಹೆಸರನ್ನು ನಮೂದಿಸಿ, ಸಲ್ಲಿಸಬೇಕು. ಟೆಂಡರ್ ಅರ್ಜಿಗಳೊಂದಿಗೆ 'ಆಯುಕ್ತರು, ವಾರ್ತಾ ಇಲಾಖೆ, ಬೆಂಗಳೂರು' ಇವರ ಹೆಸರಿನಲ್ಲಿ ಪಡೆದ ಮುಂಗಡ ಠೇವಣಿ ಮೊತ್ತಕ್ಕೆ ಡಿಡಿ / ಬ್ಯಾಂಕರ್ಸ್ ಚೆಕ್ / ಪೇ ಆರ್ಡರ್‌ಯನ್ನು ಶೆಡ್ಯೂಲ್ ಬ್ಯಾಂಕ್‌ನಿಂದ ಪಡೆದು ಲಗತ್ತಿಸಿರಬೇಕು. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಆಯುಕ್ತರು, ವಾರ್ತಾ ಇಲಾಖೆ, ಬೆಂಗಳೂರು ಇವರು ಹೊಂದಿರುವರು. ಹೆಚ್ಚಿನ ವಿವರಗಳನ್ನು ಇಲಾಖೆಯ ವೆಬ್‌ಸೈಟ್ www.karnatakainformation.org ದಿಂದ ಪಡೆಯಬಹುದು.

**ಕೆ.ವಿ.ಆರ್.ಠ್ಯಾಗೂರ್**
ಆಯುಕ್ತರು
ವಾರ್ತಾ ಇಲಾಖೆ

ಪಿ.ಆರ್. 778

**ಭದ್ರಾವತಿ ಅರಣ್ಯ ವಿಭಾಗ**

**ಸಂಕ್ಷಿಪ್ತ ಮರು ಟೆಂಡರ್ ಪ್ರಕಟಣೆ**

**ಸಂಖ್ಯೆ. ಎ2-ಬಿಯುಡಿ-ಕಟ್ಟಡ.ಸಿಆರ್-465/07-08, ದಿನಾಂಕ: 26ನೇ ನವೆಂಬರ್ 2007**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2007-08ನೇ ಸಾಲಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗಕ್ಕೆ ಬರುವ ಭದ್ರಾವತಿ, ಉಂಬ್ಳೇಬೈಲು, ತರೀಕೆರೆ, ಚನ್ನಗಿರಿ, ಲಕ್ಕವಳ್ಳಿ, ಅಜ್ಜಂಪುರ ಮತ್ತು ಜಿ.ಟಿ.ಡಿ. ತರೀಕೆರೆ ವಲಯಗಳಲ್ಲಿ ಸಿವಿಲ್ ಕಾಮಗಾರಿ ನಿರ್ವಹಿಸುವ ಸಲುವಾಗಿ ಆಸಕ್ತ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಆಸಕ್ತ ಗುತ್ತಿಗೆದಾರರು ದಿನಾಂಕ:26.12.2007 ರ ಅಪರಾಹ್ನ 4.00 ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ರವರ ಕಛೇರಿಯಲ್ಲಿರಿಸಿದ ಟೆಂಡರ್ ಪೆಟ್ಟಿಗೆಗೆ ಹಾಕಲು ಕೋರಿದೆ. ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅದೇ ದಿನ ಅಪರಾಹ್ನ 4.30 ಗಂಟೆಗೆ ತೆರೆಯಲಾಗುತ್ತದೆ.

ಒಂದು ವೇಳೆ ಮೇಲೆ ಹೇಳಿದ ದಿನಾಂಕದಂದು ಯಾವ ಗುತ್ತಿಗೆದಾರರು ಟೆಂಡರ್ ಹಾಕದಿದ್ದಲ್ಲಿ ಇದೇ ಟೆಂಡರ್ ಪ್ರಕ್ರಿಯೆಯನ್ನು ಮುಂದುವರೆಸಿ ಮರು ಟೆಂಡರ್‌ನ್ನು ದಿನಾಂಕ:29.12.2007 ರಂದು ಅಪರಾಹ್ನ 4.00 ಗಂಟೆಯೊಳಗೆ ಕರೆಯಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅದೇ ದಿನ ಅಪರಾಹ್ನ 4.30 ಗಂಟೆಗೆ ತೆರೆಯಲಾಗುವುದು.

| ಕ್ರ. ಸಂ. | ವಲಯ | ಘಟಕ ಸಂಖ್ಯೆ | ಕಾಮಗಾರಿಯ ವಿವರ | ಅಂದಾಜು ಮೊತ್ತ ರೂ. ಗಳಲ್ಲಿ | ಇ.ಎಂ.ಡಿ. |
|---|---|---|---|---|---|
| 1. | ಭದ್ರಾವತಿ | 1 | ಕೆ.ಎಸ್.ಎಫ್.ಎಂ.ಬಿ.ಸಿ. ಲೆಕ್ಕ ಶೀರ್ಷಿಕೆಯಡಿಯಲ್ಲಿ ಭದ್ರಾವತಿಯಲ್ಲಿ ವಲಯ ಅರಣ್ಯಾಧಿಕಾರಿಗಳ ನಿವಾಸದ ಕಟ್ಟಡ ನಿರ್ಮಾಣ ಮಾಡುವುದು | 6.93 | 20000 |
| | ” | 1 | ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ ನಿರ್ವಹಣೆ ಹಾಗೂ ಸುಣ್ಣ ಬಣ್ಣ ಕಾಮಗಾರಿ (01 ಟಿಂಬರ್ ಲೆಕ್ಕಶೀರ್ಷಿಕೆ ಅಡಿಯಲ್ಲಿ) | 2.50 | 6500 |
| | ” | 1 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ನಿವಾಸ ಗೃಹ ನಿರ್ವಹಣೆ (01 ಟಿಂಬರ್ ಲೆಕ್ಕಶೀರ್ಷಿಕೆ ಅಡಿಯಲ್ಲಿ) | 0.35 | 1000 |
| | ” | 1 | ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನಿವಾಸಕ್ಕೆ ಕಾಂಪೌಂಡ್ ವಾಲ್ ನಿರ್ಮಾಣ (01 ಟಿಂಬರ್ ಲೆಕ್ಕಶೀರ್ಷಿಕೆ ಅಡಿಯಲ್ಲಿ) | 4.50 | 11500 |
| | ” | 15 | ಭದ್ರಾವತಿಯ ಅರಣ್ಯ ಸಿಬ್ಬಂದಿಯ ನಿವಾಸದ ನಿರ್ವಹಣೆ-15 ಸಂಖ್ಯೆ, ಪ್ರತಿ ಕಟ್ಟಡಕ್ಕೆ ರೂ.30000/- ರಂತೆ) (01 ಟಿಂಬರ್ ಲೆಕ್ಕಶೀರ್ಷಿಕೆ ಅಡಿಯಲ್ಲಿ) | 4.50 | 11500 |
| 2. | ಉಂಬ್ಳೇಬೈಲು | 2 | ಲ್ಯಾಂಡ್ ಅಂಡ್ ಬಿಲ್ಡಿಂಗ್ ಲೆಕ್ಕ ಶೀರ್ಷಿಕೆಯಡಿಯಲ್ಲಿ ಉಂಬ್ಳೇಬೈಲು ವಲಯದಲ್ಲಿ ವಲಯ ಅರಣ್ಯಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಮಾಡುವುದು | 6.75 | 20000 |
| | ” | 4 | ಉಂಬ್ಳೇಬೈಲು ವಲಯದ ಸಿಬ್ಬಂದಿ ವಸತಿ ಗೃಹಗಳ ನಿರ್ವಹಣೆ-4 ನಂ. ಪ್ರತಿ ಕಟ್ಟಡಕ್ಕೆ ರೂ.30000/-ರಂತೆ) (01 ಟಿಂಬರ್ ಲೆಕ್ಕಶೀರ್ಷಿಕೆ ಅಡಿಯಲ್ಲಿ) | 1.20 | 3000 |
| 3. | ತರೀಕೆರೆ | 3 | ತರೀಕೆರೆ ವಲಯದ ಕೆಮ್ಮಣ್ಣುಗುಂಡಿ ಅರಣ್ಯ ವಿಶ್ರಾಂತಿ ಗೃಹಕ್ಕೆ ಹೆಚ್ಚುವರಿ ಕೊಠಡಿ ನಿರ್ಮಾಣ ಮಾಡುವುದು. 2 ಸಂಖ್ಯೆ (01 ಟಿಂಬರ್ ಲೆಕ್ಕಶೀರ್ಷಿಕೆ ಅಡಿಯಲ್ಲಿ) | 2.00 | 5000 |
| | ” | 1 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ತರೀಕೆರೆ ರವರ ನಿವಾಸದ ನಿರ್ವಹಣೆ, ಪ್ರತಿ ಕಟ್ಟಡಕ್ಕೆ ರೂ.30000/-ರಂತೆ) (01 ಟಿಂಬರ್ ಲೆಕ್ಕಶೀರ್ಷಿಕೆ ಅಡಿಯಲ್ಲಿ) | 0.35 | 1000 |
| | ” | 6 | ತರೀಕೆರೆ ವಲಯದ ಸಿಬ್ಬಂದಿ ವಸತಿ ಗೃಹಗಳ ನಿರ್ವಹಣೆ 6 ನಂ. | 1.80 | 4500 |
| 4. | ಚನ್ನಗಿರಿ | 6 | ಚನ್ನಗಿರಿ ವಲಯದ ಸಿಬ್ಬಂದಿ ವಸತಿ ಗೃಹದ ನಿರ್ಮಾಣ 6 ನಂ | 1.80 | 4500 |
| 5. | ಲಕ್ಕವಳ್ಳಿ | 4 | ಲಕ್ಕವಳ್ಳಿ ವಲಯದ ಸಿಬ್ಬಂದಿ ಗೃಹಗಳ ನಿರ್ವಹಣೆ - 4 ನಂ. | 1.20 | 3000 |
| 6. | ಅಜ್ಜಂಪುರ | 2 | ಅಜ್ಜಂಪುರ ವಲಯದ ಸಿಬ್ಬಂದಿ ವಸತಿ ಗೃಹಗಳ ನಿರ್ವಹಣೆ-2 ನಂ. | 0.60 | 15000 |
| 7. | ಜಿ.ಟಿ.ಡಿ. ತರೀಕೆರೆ | 1 | ಸರ್ಕಾರಿ ನಾಟ ಸಂಗ್ರಹಾಲಯ, ತರೀಕೆರೆ ಕಾಂಪೌಂಡ್ ನಿರ್ಮಾಣ ನೀರು ಸರಬರಾಜು ಮತ್ತು ವಾಚರ್ ಶೆಡ್ ನಿರ್ಮಾಣ | 34.90 | 87500 |

ನಿಬಂಧನೆಗಳು:

1. ಟೆಂಡರ್ ಪ್ರಕಟಣೆಯಲ್ಲಿ ತೋರಿಸಿರುವ ಕಾಮಗಾರಿಗಳ ಗುರಿ ಮತ್ತು ಪ್ರದೇಶಗಳ ವ್ಯತ್ಯಾಸವಾದಲ್ಲಿ ಪರಿಷ್ಕೃತ ಗುರಿ ಮತ್ತು ಪ್ರದೇಶಗಳನ್ನು ಕೆಲಸದ ಆದೇಶದ ಮೊದಲು ನೀಡಲಾಗುವುದು.
2. ಟೆಂಡರ್ ಫಾರಂಗಳನ್ನು ರೂ.200/-ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ:26.12.2007 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯೊಳಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆವುಳ್ಳವರು ಈ ವಿಭಾಗದಲ್ಲಿ 2007-08ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೊಂದಾಯಿಸಿಕೊಂಡಿರತಕ್ಕದ್ದು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
3. ಪ್ರತಿ ಕಾಮಗಾರಿಗೂ ಪ್ರತ್ಯೇಕ ಟೆಂಡರ್ ಫಾರಂಗಳನ್ನು ತುಂಬಿ ಅಗತ್ಯ ಇ.ಎಂ.ಡಿ. ಹಣ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ರವರ ಹೆಸರಿಗೆ ಪಡೆದ ರಾಷ್ಟ್ರೀಕೃತ ಬ್ಯಾಂಕ್ ಡಿ.ಡಿ. ಜೊತೆಗೆ ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಕಛೇರಿಯಲ್ಲಿಟ್ಟ ಟೆಂಡರ್ ಪೆಟ್ಟಿಗೆಯೊಳಗೆ ದಿನಾಂಕ:26.12.2007 ಅಪರಾಹ್ನ 4.00 ಗಂಟೆಯೊಳಗೆ ಹಾಕುವುದು. ಟೆಂಡರ್ ಫಾರಂನಲ್ಲಿ ನಮೂದಿಸಿದ ಶೇಕಡವಾರು ಹೆಚ್ಚು ಅಥವಾ ಕಡಿಮೆ ದರವನ್ನು ಅಂಕ ಮತ್ತು ಅಕ್ಷರಗಳೆರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಬೇಕು. ತಿದ್ದುಪಡಿ ಇದ್ದಲ್ಲಿ ಟೆಂಡರ್‌ದಾರರು ಸಹಿಯೊಡನೆ ದೃಢೀಕರಿಸತಕ್ಕದ್ದು. ಹಾಗೂ ಅದೇ ದಿವಸ 4.30 ಗಂಟೆಗೆ ಟೆಂಡರ್ ಪೆಟ್ಟಿಗೆಯನ್ನು ತೆರೆದು ಫಲಿತಾಂಶವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಅಥವಾ ಅವರಿಂದ ಅಧಿಕೃತವಾಗಿ ನಿಯೋಜಿಸಿದ ಅಧಿಕಾರಿಯಿಂದ ಘೋಷಣೆ ಮಾಡಲಾಗುವುದು.
4. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್ ಸ್ವೀಕರಿಸಲಾಗುವುದಿಲ್ಲ.
5. ಯಾವುದೇ ಕಾರಣ ನೀಡದೆ ಟೆಂಡರನ್ನು ಒಪ್ಪುವ ಅಥವಾ ತಿರಸ್ಕರಿಸುವ ಅಥವಾ ಟೆಂಡರ್ ರದ್ದುಪಡಿಸುವ ಅಥವಾ ಮುಂದೂಡುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರು ಕಾಯ್ದಿರಿಸಿಕೊಂಡಿರುತ್ತಾರೆ. ಟೆಂಡರ್‌ದಾರರಿಂದ ಗುಣಮಟ್ಟದ ಕಾಮಗಾರಿ ಇಲ್ಲದೇ ಕಳಪೆ ಕಾಮಗಾರಿ ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ರವರು ಸದರಿ ಟೆಂಡರ್ ಗುತ್ತಿಗೆ ರದ್ದುಪಡಿಸುವ ಪೂರ್ಣ ಅಧಿಕಾರ ಹೊಂದಿರುತ್ತಾರೆ.
6. ಕೆಲಸಗಳ ವಿವರಗಳನ್ನು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
7. ದಿನಾಂಕ: 26.12.2007 ರಂದು ಟೆಂಡರ್ ಬಾರದಿದ್ದಲ್ಲಿ ಮರು ಟೆಂಡರನ್ನು ದಿನಾಂಕ: 29.12.2007 ರಂದು ನಿಗದಿಪಡಿಸಿದ್ದು ಮರು ಟೆಂಡರಿಗೆ ಟೆಂಡರ್ ಫಾರಂಗಳು 29.12.2007 ರಂದು ಮಧ್ಯಾಹ್ನ 1.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯುವುದು. ಹಾಗೂ ಭರ್ತಿ ಮಾಡಿದ ಟೆಂಡರ್ ಫಾರಂಗಳು ಅಗತ್ಯ ಇ.ಎಂ.ಡಿ. ಮೊತ್ತದ ರಾಷ್ಟ್ರೀಕೃತ ಬ್ಯಾಂಕ್ ಹುಂಡಿಯೊಡನೆ 4.00 ಗಂಟೆಯೊಳಗೆ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು. ಉಳಿದಂತೆ 1 ರಿಂದ 6ರ ವರೆಗೆ ನಿಬಂಧನೆಗಳು ಮರು ಟೆಂಡರ್‌ಗೂ ಸಹ ಅನ್ವಯಿಸುತ್ತದೆ.

**ಎಸ್. ವೆಂಕಟೇಸನ್**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 742

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು**

**ನೆಡುತೋಪಿನಲ್ಲಿರುವ ಮರಗಳ ಟೆಂಡರ್-ಕಂ-ಹರಾಜು**

**ಸಂಖ್ಯೆ:ಎ1:ಬಿಯುಡಿ:ನೀನೆತೋ:ಕತ್ರಾವಣೆ:ವಿವ:27/07-08, ದಿನಾಂಕ: 20ನೇ ನವೆಂಬರ್ 2007**

ತುಮಕೂರು ಸಾಮಾಜಿಕ ಅರಣ್ಯ ವಿಭಾಗಕ್ಕೆ ಸಂಬಂಧಿಸಿದ ತುಮಕೂರು, ಚಿ.ನಾ.ಹಳ್ಳಿ ಸಾಮಾಜಿಕ ಅರಣ್ಯ ವಲಯದ ನೆಡುತೋಪಿಗಳಲ್ಲಿರುವ ನೀಲಗಿರಿ/ಅಕೇಶಿಯಾ ಮರಗಳನ್ನು ದಿ:20.12.2007, ಕುಣಿಗಲ್ ಸಾಮಾಜಿಕ ಅರಣ್ಯ ವಲಯದ ನೆಡುತೋಪಿಗಳಲ್ಲಿರುವ ನೀಲಗಿರಿ/ಅಕೇಶಿಯಾ ಮರಗಳನ್ನು ದಿ:26.12.2007 ಹಾಗೂ ಮಧುಗಿರಿ ಹಾಗೂ ಕೊರಟಗೆರೆ ಸಾಮಾಜಿಕ ಅರಣ್ಯ ವಲಯದ ನೆಡುತೋಪಿಗಳಲ್ಲಿರುವ ನೀಲಗಿರಿ/ಅಕೇಶಿಯಾ ಮರಗಳನ್ನು ದಿನಾಂಕ:28.12.2007 ರಂದು ಟೆಂಡರ್-ಕಂ- ಹರಾಜು ಮೂಲಕ ವಿಲೇವಾರಿ ಮಾಡುವ ಸಲುವಾಗಿ ಟೆಂಡರ್–ಕಂ–ಹರಾಜು ಕರೆಯಲಾಗಿದೆ. ಟೆಂಡರ್ ಫಾರಂ ಮಾರಾಟ ಟೆಂಡರ್ ದಿನಾಂಕದಂದು ಮಧ್ಯಾಹ್ನ 12.00 ಗಂಟೆಯವರೆಗೆ ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ಸಮಯ ಮೇಲೆ ನಮೂದಿಸಿರುವ ದಿನಾಂಕದಂದು 2.00 ಗಂಟೆಯವರೆಗೆ ಬಹಿರಂಗ ಹರಾಜು ಮಾಡುವ ಹಾಗೂ ಟೆಂಡರ್ ತೆರೆಯುವ ಸಮಯ 3.30 ರಿಂದ 5.00 ಗಂಟೆಯವರೆಗೆ ಟೆಂಡರ್-ಕಂ-ಹರಾಜು ನಡೆಸುವ ದಿನದಂದು ಬಿಡ್ಡುದಾರರು ಭಾಗವಹಿಸದೇ ಇದ್ದಲ್ಲಿ ಅಥವಾ ಬಿಡ್ಡುಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ಕ್ರಮವಾಗಿ ದಿ:26.12.2007 ಹಾಗೂ 02.01.2008 ರಂದು ನಡೆಸಲಾಗುವುದು. ಈ ರೀತಿಯ ಮರು ಹರಾಜಿಗೆ ಪುನಃ ಯಾವುದೇ ಪ್ರಕಟಣೆ ನೀಡಲಾಗುವುದಿಲ್ಲ. ಹರಾಜಿಗೆ ಸಂಬಂಧಿಸಿದಂತೆ ಇ.ಎಂ.ಡಿ.ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು ಇವರ ಹೆಸರಿಗೆ ರೂ. 50000/- (ಐವತ್ತು ಸಾವಿರ) ಡಿ.ಡಿ.ಯನ್ನು ಸ್ಥಳೀಯ ರಾಷ್ಟ್ರೀಕೃತ ಬ್ಯಾಂಕ್‌ನಿಂದ ತೆಗೆದು ಸಲ್ಲಿಸುವುದು. ಹೆಚ್ಚಿನ ವಿವರಗಳಿಗೆ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಸಾಮಾಜಿಕ ಅರಣ್ಯ ವಿಭಾಗ, ತುಮಕೂರು.

ಪಿ.ಆರ್. 743

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಿಆಸುಇ 63 ಡಿಟಿಎಂ 2007, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2007**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ವಿವಿಧ ಕಛೇರಿಗಳಲ್ಲಿರುವ ವಿವಿಧ ಮಾದರಿಯ ತೋಷಿಭಾ / ಡುಪ್ಲೋ / ಗೆಸ್ಟೆಟ್ನರ್ / ರಿಸೋ ಕಾಪಿಯರ್ ಯಂತ್ರಗಳಿದ್ದು, ಇವುಗಳ ವಿಸ್ತಾರವಾದ (Comprehensive) ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಲು ಸರ್ಕಾರವು ಉದ್ದೇಶಿಸಿ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಿದೆ.

| ಕ್ರ. ಸಂ. | ಯಂತ್ರದ ಮಾದರಿ | ಸಂಖ್ಯೆ |
|---|---|---|
| 1 | ರಿಸೋ ಜಿಆರ್ 1750 | 1 |
| 2 | ರಿಸೋ RZ 2000 AG | 1 |
| 3 | ಹೆಚ್‌ಸಿಎಲ್ 1560 ಸಿಎಲ್‌ಬಿ | 1 |
| 4 | ಹೆಚ್‌ಸಿಎಲ್ ಇ ಸ್ಟೂಡಿಯೊ 200 | 12 |
| 5 | ಹೆಚ್‌ಸಿಎಲ್ ಇ ಸ್ಟೂಡಿಯೊ 350 | 1 |
| 6 | ಹೆಚ್‌ಸಿಎಲ್ ಡಿಪಿ 2030 | 2 |
| 7 | ಹೆಚ್‌ಸಿಎಲ್ ಡಿಪಿ 21 ಎಸ್ | 1 |
| 8 | ಹೆಚ್‌ಸಿಎಲ್ ಡಿಪಿ 23 ಎಸ್ | 1 |
| 9 | ಹೆಚ್‌ಸಿಎಲ್ ಡಿಪಿ 2570 | 1 |
| 10 | ಹೆಚ್‌ಸಿಎಲ್ ಡಿಪಿ 31 ಎಸ್ | 1 |
| 11 | ಹೆಚ್‌ಸಿಎಲ್ ಡಿಪಿ 3580 | 1 |
| 12 | ಹೆಚ್‌ಸಿಎಲ್ ಡಿಪಿ 430 | 1 |
| 13 | ಗೆಸ್ಟೇಟ್ನರ್ 5308 ಬಿಎಸ್ | 1 |
| 14 | ಗೆಸ್ಟೇಟ್ನರ್ 5327 | 2 |
| 15 | ಗೆಸ್ಟೇಟ್ನರ್ ಡಿಎಸ್‌ಎಂ 618 | 3 |
| | **ಒಟ್ಟು** | **30** |

ಇಚ್ಛೆಯುಳ್ಳ ತಯಾರಕರು ಅಥವಾ ಅವರ ಮಾರಾಟಗಾರರು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ) ಕೊಠಡಿ ಸಂಖ್ಯೆ: 25, ನೆಲಮಹಡಿ, ವಿಧಾನಸೌಧ ಇಲ್ಲಿ ರೂ.100.00 + ಶೇಕಡ 12.5 ರಂತೆ ಮಾರಾಟ ತೆರಿಗೆ ಒಟ್ಟು ರೂ.114/- (ರೂಪಾಯಿ ನೂರ ಹದಿನಾಲ್ಕು ಮಾತ್ರ)ನ್ನು ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಸಲ್ಲಿಸಿ ನಂತರ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ ವಿಧಾನಸೌಧ, ಇಲ್ಲಿ ಪಡೆದುಕೊಳ್ಳಬಹುದು. ದಿನಾಂಕ: 15.12.2007 ರಂದು ಮಧ್ಯಾಹ್ನ 3:30 ಗಂಟೆಯವರೆಗೆ ಟೆಂಡರ್ ಅರ್ಜಿಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 22.12.2007 ರಂದು ಮಧ್ಯಾಹ್ನ 3:30 ಗಂಟೆವರೆಗೆ, ತದನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲಿಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು - 560 001 ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 29.12.2007 ರಂದು ಮಧ್ಯಾಹ್ನ 4:30 ಗಂಟೆಗೆ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜೆ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದಲೇ ಖರೀದಿಸಿ ನಿಗಧಿತ ನಮೂನೆಯಲ್ಲಿಯೇ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2. ಮೊಹರಾದ ಟೆಂಡರ್ ಲಕೋಟೆಯ ಮೇಲೆ "ಕಾಪಿಯರ್ ಯಂತ್ರಗಳ ವಾ.ಸೇ.ನಿರ್ವಹಣೆಗೆ ದರಪಟ್ಟಿ" ಎಂದು ಬರೆಯತಕ್ಕದ್ದು.
3. ಟೆಂಡರ್‌ದಾರರು ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
4. ಮುಂಗಡ ಠೇವಣಿ (ಇ.ಎಂ.ಡಿ.) ಮೊತ್ತ ರೂ. 5000/- ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು - 560 001 ಇವರ ಹೆಸರಿನಲ್ಲಿ ಸಲ್ಲಿಸತಕ್ಕದ್ದು, ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
5. ದರಪಟ್ಟಿಯೊಂದಿಗೆ ಕಳೆದ ಆರು ತಿಂಗಳ ಸೇವಾ ತೆರಿಗೆ ಸಲ್ಲಿಸಿದ ಬಗ್ಗೆ ದಾಖಲೆ
6. ದರಪಟ್ಟಿಯೊಂದಿಗೆ ಕಳೆದ ಸಾಲಿನಲ್ಲಿ ಪಾವತಿಸಿದ ಆದಾಯ ತೆರಿಗೆ ಬಗ್ಗೆ ದಾಖಲೆಗಳನ್ನು (ಸರಳ್) ಸಲ್ಲಿಸತಕ್ಕದ್ದು.

7. ಟೆಂಡರ್‌ನ್ನು ಅನುಮೋದಿಸಿದ್ದಲ್ಲಿ ಟೆಂಡರ್‌ದಾರರು ಗೊತ್ತುಪಡಿಸಿರುವ ದರದಲ್ಲಿಯೇ, ಗೊತ್ತುಪಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ವಾ.ಸೇ.ನಿರ್ವಹಣೆಯನ್ನು ಒದಗಿಸಲು ಬದ್ದರಿರಬೇಕು.
8. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ವಾರ್ಷಿಕ ಸೇವಾ ನಿರ್ವಹಣೆಯ ನಂತರ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
9. ಟೆಂಡರ್‌ನ್ನು ಅನುಮೋದಿಸಿದ್ದಲ್ಲಿ ಟೆಂಡರ್‌ದಾರರು ಗೊತ್ತುಪಡಿಸಿರುವ ದರದಲ್ಲಿಯೇ, ಗೊತ್ತುಪಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಸಾಮಗ್ರಿಗಳನ್ನು ಒದಗಿಸಲು ಬದ್ದರಿರಬೇಕು.
10. ಮೇಲಿನ ಅಂಶಗಳ ಬಗ್ಗೆ ಪೂರ್ಣ ವಿವರ ನೀಡತಕ್ಕದ್ದು. ಅಪೂರ್ಣ ವಿವರ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
11. ಯಾವುದೇ ಕಾರಣವನ್ನು ನೀಡದೆ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಅಂಗೀಕರಿಸುವ ಸಕ್ಷಮ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.
12. ಮೇಲಿನ ಅಂಶಗಳ ಬಗ್ಗೆ ಪೂರ್ಣ ವಿವರ ನೀಡತಕ್ಕದ್ದು. ಅಪೂರ್ಣ ವಿವರ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
13. ಯಾವುದೇ ಕಾರಣವನ್ನು ನೀಡದೆ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಅಂಗೀಕರಿಸುವ ಸಕ್ಷಮ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ), ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ 2203 3440 ಅಥವಾ 2203 3487 ರಲ್ಲಿ ಸಂಪರ್ಕಿಸಬಹುದು.

**ಕೆ.ಎಸ್. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

**ಅನುಬಂಧ**

ಟೆಂಡರ್ ಪ್ರಕಟಣೆ ಸಂಖ್ಯೆ:

ಕಾಪಿಯರ್ : ಡಿಜಿಟಲ್ ಕಾಪಿಯರ್ : ಡೂಪ್ಲಿಕೇಟರ್
ಯಂತ್ರಗಳ ಬಳಕೆ ಪದಾರ್ಥಗಳ ದರ

ಸಿಆಸುಇ 63 ಡಿಟಿಎಂ 2007

| ಕ್ರ. ಸಂ. | ಯಂತ್ರದ ಮಾದರಿ | ದರ ರೂ. (ಒಂದು ಯಂತ್ರಕ್ಕೆ) | ತೆರಿಗೆ (ಶೇ.) |
|---|---|---|---|
| 1 | ರಿಸೋ ಜಿಆರ್ 1750 | | |
| 2 | ರಿಸೋ RZ 2000 AG | | |
| 3 | ಹೆಚ್‌ಸಿಎಲ್ 1560 ಸಿಎಲ್‌ಬಿ | | |
| 4 | ಹೆಚ್‌ಸಿಎಲ್ ಇ ಸ್ಟೂಡಿಯೊ 200 | | |
| 5 | ಹೆಚ್‌ಸಿಎಲ್ ಇ ಸ್ಟೂಡಿಯೊ 350 | | |
| 6 | ಹೆಚ್‌ಸಿಎಲ್ ಡಿಪಿ 2030 | | |
| 7 | ಹೆಚ್‌ಸಿಎಲ್ ಡಿಪಿ 21 ಎಸ್ | | |
| 8 | ಹೆಚ್‌ಸಿಎಲ್ ಡಿಪಿ 23 ಎಸ್ | | |
| 9 | ಹೆಚ್‌ಸಿಎಲ್ ಡಿಪಿ 2570 | | |
| 10 | ಹೆಚ್‌ಸಿಎಲ್ ಡಿಪಿ 31 ಎಸ್ | | |
| 11 | ಹೆಚ್‌ಸಿಎಲ್ ಡಿಪಿ 3580 | | |
| 12 | ಹೆಚ್‌ಸಿಎಲ್ ಡಿಪಿ 430 | | |
| 13 | ಗೆಸ್ಟೇಟ್ನರ್ 5308 ಬಿಎಸ್ | | |
| 14 | ಗೆಸ್ಟೇಟ್ನರ್ 5327 | | |
| 15 | ಗೆಸ್ಟೇಟ್ನರ್ ಡಿಎಸ್‌ಎಂ 618 | | |

ಟೆಂಡರ್‌ದಾರರ ಸಹಿ
(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಕೆ.ಎಸ್. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

ಪಿ.ಆರ್. 787

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯ ವಲಯ) ತುಮಕೂರು**

**ಸಂಖ್ಯೆ: ಹಿಸತೋನಿ:ರಾವ:ತು:ತಾಸ/24/07-08, ದಿನಾಂಕ: 7ನೇ ಡಿಸೆಂಬರ್ 2007**

**-:ರಾಜ್ಯ ವಲಯ ತೋಟಗಾರಿಕೆ ಕ್ಷೇತ್ರಗಳ ಹುಣಸೆ ಫಸಲು ವಿಲೇವಾರಿಗೆ ಟೆಂಡರ್ ಕಂ ಹರಾಜು ಪ್ರಕಟಣೆ:-**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು, ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ತೋಟಗಾರಿಕೆ ಕ್ಷೇತ್ರಗಳಲ್ಲಿ 2007-08ನೇ ಸಾಲಿನ ಹುಣಸೆ ಫಸಲನ್ನು ಹರಾಜು ಅನುಮೋದಿಸಿದ ದಿನಾಂಕದಿಂದ ರೂಢಿಸಿಕೊಳ್ಳಲು ಟೆಂಡರ್ ಯಾ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ಹೆಚ್ಚಿನ ವ್ಯಾಪಾರಿಗಳು ಸರಿಯಾದ ಸಮಯಕ್ಕೆ ಹಾಜರಿದ್ದು ಇದರಲ್ಲಿ ಭಾಗವಹಿಸಲು ಕೋರಲಾಗಿದೆ. ಹೆಚ್ಚಿನ ವಿವರಗಳು ಮತ್ತು ಟೆಂಡರ್ ಫಾರಂಗಳನ್ನು ಈ ಕೆಳ ಸಹಿದಾರರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ರೂ.25-00 ಗಳನ್ನು ಪಾವತಿಸಿ ನಿಗಧಿತ ಫಾರಂಗಳನ್ನು ಪಡೆಯಬಹುದು.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ/ನರ್ಸರಿಗಳ ಹೆಸರು | ಫಸಲಿನ ವಿವರ | ಠೇವಣಿ ಮೊತ್ತ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಕಂ ಬಹಿರಂಗ ಹರಾಜು ನಡೆಸುವ ದಿನಾಂಕ ಹಾಗೂ ವೇಳೆ |
|---|---|---|---|---|---|
| 1. | ಕುಣಿಗಲ್ ನರ್ಸರಿ ಕುಣಿಗಲ್ | ಹುಣಸೆ | 500 | 5.1.2008 ಸಂಜೆ 5.00 | 7.1.2008 ಬೆಳಿಗ್ಗೆ 11.30 ಕ್ಕೆ |
| 2. | ಶಿರಾ ನರ್ಸರಿ | ಹುಣಸೆ | 500 | 7.1.2008 ಸಂಜೆ 5.00 | 8.1.2008 ಬೆಳಿಗ್ಗೆ 11.30 ಕ್ಕೆ |
| 3. | ಜಿಲ್ಲಾ ನರ್ಸರಿ ತುಮಕೂರು | ಹುಣಸೆ | 500 | 8.1.2008 ಸಂಜೆ 5.00 | 9.1.2008 ಬೆಳಿಗ್ಗೆ 11.00 ಕ್ಕೆ |
| 4. | ರಾಜವಂತಿ (ಪಾವಗಡ ತಾ:) | ಹುಣಸೆ | 500 | 9.1.2008 ಸಂಜೆ 5.00 | 10.1.2008 ಮಧ್ಯಾಹ್ನ 1.00 ಕ್ಕೆ |

**ವಿಶೇಷ ಸೂಚನೆ:-**

ಠೇವಣಿ ಮೊತ್ತವನ್ನು ಕ್ರಾಸ್ಡ್ ಡಿ.ಡಿ.ರೂಪದಲ್ಲಿ ಮಾತ್ರ ಸ್ವೀಕರಿಸಲಾಗುವುದು. ನಗದು ರೂಪದಲ್ಲಿ ಯಾವುದೇ ಕಾರಣಕ್ಕೂ ಅಂಗೀಕರಿಸಲಾಗುವುದಿಲ್ಲ ಹರಾಜು ಪ್ರಕ್ರಿಯೆಯನ್ನು ಸಂಬಂಧಪಟ್ಟ ಕ್ಷೇತ್ರಗಳಲ್ಲಿ ನಡೆಸಲಾಗುವುದು.

ಟೆಂಡರ್‌ದಾರರು ಭರ್ತಿ ಮಾಡಿದ ಫಾರಂ ಜೊತೆಯಲ್ಲಿ ತಾವು ನಮೂದಿಸುವ ಟೆಂಡರ್ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಮತ್ತು ನಿಗದಿಪಡಿಸಿದ ಠೇವಣಿ ಮೊತ್ತವನ್ನು ಅಡ್ಡಗೆರೆ ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು ರವರ ಹೆಸರಿನಲ್ಲಿ ಪಡೆದು ಹಿಂಬದಿಯಲ್ಲಿ ಟೆಂಡರ್‌ದಾರರ ಹೆಸರು ಮತ್ತು ವಿಳಾಸ ನಮೂದಿಸಿ ಡಿ.ಡಿ. ಯನ್ನು ಕಡ್ಡಾಯವಾಗಿ ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು. ಟೆಂಡರ್ ಫಾರಂನಲ್ಲಿ ಹೆಸರು ವಿಳಾಸ ಟೆಂಡರ್ ಮೊತ್ತ ಇತ್ಯಾದಿಗಳನ್ನು ದಾಖಲಿಸಿ ಸಹಿ ಮಾಡಿರಬೇಕು ಇಲ್ಲದಿದ್ದರೆ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು.

ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಕ್ರಾಸ್ಡ್ ಡಿ.ಡಿ.ರೂಪದಲ್ಲೇ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆಯನ್ನು ಪಡೆಯಬೇಕು. ನಗದು ಹಣ ಸ್ವೀಕರಿಸುವುದಿಲ್ಲ ಟೆಂಡರ್ ಹಾಗೂ ಹೆಚ್ಚಿನ ಮೊತ್ತಗಳಲ್ಲಿ ಅತೀ ಹೆಚ್ಚಿನ ಮೊತ್ತವಾದ ಒಂದನ್ನು ಮಾತ್ರ ಪರಿಗಣಿಸಲಾಗುವುದು. ಅತೀ ಹೆಚ್ಚಿನ ಬಿಡ್ಡುದಾರರು ಬಿಡ್ಡಿನ ಮೊತ್ತದ ಶೇಕಡ 50 ಭಾಗದ ಹಣವನ್ನು ಅಂದೇ ಸ್ಥಳದಲ್ಲಿಯೇ ಪಾವತಿಸಿ ರಶೀದಿ ಪಡೆಯುವುದು.

ಮೇಲಿನ ಕ್ಷೇತ್ರಗಳ ಫಸಲನ್ನು ಟೆಂಡರ್ ಯಾ ಬಹಿರಂಗ ಹರಾಜು ಅನುಮೋದನೆಯಾದ ದಿನಾಂಕದಿಂದ 10 ದಿನಗಳ ಒಳಗೆ ಪೂರ್ಣ ಮೊತ್ತವನ್ನು ಪಾವತಿಸಿ ಫಸಲನ್ನು ರೂಡಿಸಿಕೊಳ್ಳಬಹುದಾಗಿರುತ್ತದೆ. ಸದರಿ ಟೆಂಡರ್ ಯಾ ಬಹಿರಂಗ ಹರಾಜು ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಇಲಾಖಾ ಅಧಿಕಾರಿಗಳು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯ ವಲಯ) ತುಮಕೂರು.

ಪಿ.ಆರ್. 779

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು**

**ಟೆಂಡರು ಪ್ರಕಟಣೆ (ಎರಡು ಲಕೋಟೆ ಪದ್ಧತಿ) (2ನೇ ಕರೆ)**

**ಸಂಖ್ಯೆ:8:ಜಿಎನ್‌ಎಲ್:ಟಿಎನ್‌ಡಿ:2007-2008:ಜೇ-2, ದಿನಾಂಕ: 28ನೇ ನವೆಂಬರ್ 2007**

ಈ ಕೆಳಗೆ ಸೂಚಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಪೆರೆನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ಆಕ್ಟ್ 2000ರ ಪ್ರಕಾರ ದ್ವಿಲಕೋಟೆ ಪದ್ಧತಿಯಲ್ಲಿ ಮೊಹರಾದ ಐಟಂ ದರ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಲಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ (ಫೈನಾನ್ಸಿಯಲ್) ಬಿಡ್ಡನ್ನು ಒಳಗೊಂಡಿದೆ. ಬಿಡ್‌ಗಳನ್ನು ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್ ಎಂದು ಗುರುತು ಹಾಕಿದ ಎರಡು ಪ್ರತ್ಯೇಕ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಈ ಎರಡು ಲಕೋಟಿಗಳಿಗೆ ಮೊಹರು

ಮಾಡಿ ಕೆಲಸದ ಶಿರೋನಾಮೆ ನಮೂದಿಸಿ ಇನ್ನೊಂದು ಮೊಹರಾದ ಲಕೋಟೆಯಲ್ಲಿಡಬೇಕು ಮತ್ತು ಬಿಡ್ಡುದಾರರ ಹೆಸರು ಹಾಗೂ ಪೂರ್ತಿ ಅಂಚೆ ವಿಳಾಸದೊಂದಿಗೆ ಕೆಳಸಹಿದಾರರಿಗೆ ಕಳುಹಿಸಬೇಕು. ಪೂರ್ತಿಗೊಳಿಸಿದ ಬಿಡ್ಡನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ-2ರ ಫಾರಂನಲ್ಲಿ ಪಿಡಬ್ಲ್ಯೂಜಿ-65 ಹಾಗೂ 66 ರಲ್ಲಿ ಹಾಗೂ ಕರ್ನಾಟಕ ಟ್ರಾನ್ಸ್‌ಪೆರನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್‌ಮೆಂಟ್ ಆ್ಯಕ್ಟ್ 2000ರಲ್ಲಿ ನಿರೂಪಿತ ಶರ್ತಗೊಳಪಟ್ಟು ದಿನಾಂಕ 28.12.2007 ರಂದು ಸಂಜೆ: 4.00 ಗಂಟೆಯ ವರೆಗೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಸ್ವೀಕರಿಸುವರು. ಈ ಕೆಳಗೆ ಸೂಚಿತ ದಿನಾಂಕದಂದು ತಾಂತ್ರಿಕ ಬಿಡ್ಡನ್ನು ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾಗಿರುವ ಬಿಡ್‌ದಾರರ ವಿತ್ತೀಯ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು. ಈ ಕೆಳಗೆ ನಮೂದಿಸಿದ ಯಾವುದಾದರೂ ದಿನಾಂಕಗಳಂದು ಸಾರ್ವತ್ರಿಕ ರಜಾವಾದಲ್ಲಿ ಮುಂದಿನ ದಿನಾಂಕವನ್ನು ಪ್ರತ್ಯೇಕವಾಗಿ ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇಎಂಡಿ ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| 1. | **ನಬಾರ್ಡ್ ಆರ್.ಐ.ಡಿ.ಎಫ್- 12ರ ಯೋಜನೆ:-** ಬೆಳ್ತಂಗಡಿ ತಾಲ್ಲೂಕಿನ ಕಾಯರ್ಪಾಡಿ-ಮುಗೇರಡ್ಕ-ಮುರಾ ರಸ್ತೆಯ ಮುಗೇರಡ್ಕ ಎಂಬಲ್ಲಿ ಸೇತುವೆ ರಚನೆ. | ರೂ. 62.64 | ಒಂದನೇ ದರ್ಜೆ | ರೂ. 63,000.00 | 9 ತಿಂಗಳು | ದರವಾರು | ರೂ. 3300.00 |

**ಸಾಮಾನ್ಯ ನಿಯಮಗಳು:-**

1. ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ನಿಗದಿಪಡಿಸಿದ ದಿನಾಂಕದವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಷನ್‌ನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಕೆಲಸದ ಬಿಡ್ಡಿಂಗ್‌ನಲ್ಲಿ ಆಸಕ್ತಿಯುಳ್ಳ ಗುತ್ತಿಗೆದಾರರು ನಗದಾಗಿ ಅಥವಾ ಮಂಗಳೂರಿನಲ್ಲಿ ಪಾವತಿ ಆಗುವಂತೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರ ಹೆಸರಿಗೆ ಪಡೆದ ಡಿ.ಡಿ. ರೂಪದಲ್ಲಿ ಪಾವತಿಸಬೇಕಾದ ಟೆಂಡರ್ ಶೆಡ್ಯೂಲ್ ಮೌಲ್ಯದೊಂದಿಗೆ (ಇದನ್ನು ಹಿಂದಿರುಗಿಸುವುದಿಲ್ಲ) ಕೆಳ ಸಹಿದಾರರಿಗೆ ಅರ್ಜಿ ಸಲ್ಲಿಸಬೇಕು. ಅರ್ಜಿ ಜೊತೆ ಗುತ್ತಿಗೆದಾರರ ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿಯೊಂದಿಗೆ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್. / ಕಾಲ್‌ಡೆಪೋಸಿಟ್, ಬ್ಯಾಂಕ್ ಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿ.ಯನ್ನು ಕೆಳ ಸಹಿದಾರರ ಹೆಸರಿಗೆ ಪ್ಲೆಜ್ ಮಾಡಬೇಕು) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ದಿನಾಂಕದ ವಿವರಗಳು ಈ ಕೆಳಕಂಡಂತಿದೆ:-
   (ಅ) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 27.12.2007ರ ಕಛೇರಿ ಕೆಲಸದ ವೇಳೆಯಲ್ಲಿ
   (ಆ) ಖಾಲಿ ಟೆಂಡರು ಫಾರಂಗಳನ್ನು ಕೊಡುವ ದಿನಾಂಕ: 27.12.2007ರ ಕಛೇರಿ ಕೆಲಸದ ವೇಳೆಯಲ್ಲಿ
   (ಇ) ಟೆಂಡರು ಸಲ್ಲಿಸುವ ಕೊನೆಯ ದಿನಾಂಕ: 28.12.2007ರ ಅಪರಾಹ್ನ 4.00ರ ವರೆಗೆ
   (ಈ) ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ: 29.12.2007ರ ಪೂರ್ವಾಹ್ನ: 11.00 ಕ್ಕೆ ಅಥವಾ ಮುಂದೆ ತಿಳಿಸಲಾಗುವ ಸಮಯ ಮತ್ತು ದಿನಾಂಕದಂದು.
3. ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಎರಡು ವರ್ಷಗಳ ಕಾಲ ಯಾವುದೇ ದುರಸ್ತಿ ಕಾರ್ಯ ಬರಬಾರದು. ಈ ಮೇಲಿನಂತೆ ಪ್ರಕಟಿತ ಚಾಚು / ಚೈನೇಜುಗಳಲ್ಲಿ ಈ ಮೇಲಿನಂತೆ ದುರಸ್ತಿ ಅವಧಿಯಲ್ಲಿ (ಡಿಫೆಕ್ಟ್ ಲಯಾಬಿಲಿಟಿ ಅವಧಿ) ಯಾವುದಾದರೂ ದುರಸ್ತಿಬೇಕಾದರೆ ಗುತ್ತಿಗೆದಾರ / ವಾಣಿಜ್ಯ ಸಂಸ್ಥೆ ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪುನರ್ ನಿರ್ಮಿಸಿಕೊಡಬೇಕು.
4. ಪ್ರತಿ ಟೆಂಡರುದಾರರು ಸೇತುವೆ ಕೆಲಸಕ್ಕೆ ಈ ಕೆಳಗೆ ನೀಡಲಾದಂತೆ ಯಂತ್ರೋಪಕರಣ ಸ್ವಂತ ಅಥವಾ ಬಾಡಿಗೆಗೆ ಹೊಂದಿದ್ದು, ಅವುಗಳ ಮಾಲೀಕತ್ವದ ಪುರಾವೆ ಲಗ್ತೀಕರಿಸಬೇಕು. ಪುರಾವೆ ರಹಿತವಾಗಿ ಸಲ್ಲಿಸಿದ ಟೆಂಡರುಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| | **ಸೇತುವೆ ಕಾಮಗಾರಿಗೆ:** | | |
| 1 | ಕಾಂಕ್ರೀಟ್ ಮಿಕ್ಸರ್ | 3 | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ |
| 2 | ಪಿನ್ ಮತ್ತು ಸ್ಕ್ರೀಡ್ ವೈಬ್ರೇಟರ್ | 3 | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ |
| 3 | ಇಲೆಕ್ಟ್ರಿಕ್ ಜನರೇಟರ್ | 2 | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ |
| 4 | ಸೆಂಟ್ರಿಫ್ಯೂಗಲ್ ಪಂಪ್ | 2 | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ |
| 5 | ಟಿಪ್ಪರ್ | 4 | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ/ಹಯರ್ ಪರ್ಚೇಸ್ ಅಗ್ರಿಮೆಂಟ್ |

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 6 | ಸ್ಟೀಲ್ ಫಾರ್ಮ್ ವರ್ಕ್ | 1500 ಚ.ಮೀ. | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ |
| 7 | ಸೆಂಟ್ರಿಂಗ್ ಪ್ಲೇಟ್ಸ್ | 800 ಚ.ಮೀ. | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ |
| 8 | ಟ್ರ್ಯಾಕ್ಟರ್ ಸಹಿತ ಕಂಪ್ರೆಸರ್ | 1 | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ |

5. ಟೆಂಡರಿನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ಉದ್ದೇಶಿಸಿರುವ ಕಾಮಗಾರಿಯ ಶೇ. 30 ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
6. ಕಾಮಗಾರಿ ನಿರ್ವಹಿಸುವುದಕ್ಕಾಗಿ, ಬೇಕಾದ ಆರ್ಥಿಕ ಸಾಮರ್ಥ್ಯವನ್ನು ಹೊಂದಿರುವ ಬಗ್ಗೆ ಟೆಂಡರ್ ಮೊಬಲಗಿನ ಶೇ. 30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ) ಲೈನ್ ಆಫ್ ಕ್ರೆಡಿಟ್‌ನ್ನು ಅರ್ಜಿಯೊಂದಿಗೆ ತಪ್ಪದೆ ನೀಡಬೇಕು.
7. ತಾಂತ್ರಿಕ ಬಿಡ್‌ಗಳ ಪುರಾವೆಯಾಗಿ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಗೆಜೆಟೆಡ್ ಅಧಿಕಾರಿಯವರಿಂದ ದೃಢೀಕರಿಸಿ ಸಲ್ಲಿಸಬೇಕು. ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಹಂತದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತದೆ.
8. ತಾಂತ್ರಿಕ ಬಿಡ್‌ನೊಂದಿಗೆ ಸಮಂಜಸವಾದ (ರಿಲೆವೆಂಡ್) ಪ್ರಮಾಣಪತ್ರಗಳು ಹಾಗೂ ವಿವರಗಳನ್ನು ಮಾತ್ರ ಲಗ್ತೀಕರಿಸಬೇಕು. ಕಂಪೆನಿ : ಏಜೆನ್ಸಿಗಳು / ವಾಣಿಜ್ಯ ಸಂಸ್ಥೆಗಳ : ಪ್ರೊಫೈಲ್ ವಿವರಗಳನ್ನು ಲಗ್ತೀಕರಿಸಬೇಕು.
9. ಜಂಟಿ ಸಹಭಾಗಿತ್ವದ ಟೆಂಡರುಗಳನ್ನು ಸ್ವೀಕರಿಸಲಾಗುವುದಿಲ್ಲ.
10. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
11. ಶರ್ತಬದ್ಧ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
12. ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಮುಗಿಸಬೇಕು. ತಪ್ಪಿದಲ್ಲಿ ನಿಯಮ ರೀತ್ಯಾ ದಂಡನಾ ಶುಲ್ಕ ತೆರಬೇಕಾಗುತ್ತದೆ.
13. ಗುತ್ತಿಗೆದಾರರು ಸಿಮೆಂಟ್, ಉಕ್ಕು ಡಾಂಬರು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲ ಸಾಮಾಗ್ರಿಗಳ ಸಂಗ್ರಹಕ್ಕೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S.) ಗುಣಮಟ್ಟಕ್ಕೆ ಸರಿಹೊಂದುವಂತಿರಬೇಕು. ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.
14. ಯಶಸ್ವೀ ಟೆಂಡರುದಾರರು ನಿರ್ವಹಿಸಿರುವ ಕಾಮಗಾರಿ ಮೊತ್ತದ ಶೇಕಡಾ 1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂಖ್ಯೆ:ಯುಎಲ್‌ಡಿ-3:ಎಲ್‌ಇಡಿ 2006:ಬೆಂಗಳೂರು:ದಿನಾಂಕ:18.1.2007ರಂತೆ ಪಾವತಿಸತಕ್ಕದ್ದು.
15. ಗುತ್ತಿಗೆದಾರರು ಅಗತ್ಯ ಇರುವ ಎಲ್ಲಾ ದಾಖಲೆಗಳನ್ನು ನಿಗದಿತ ರೂಪದಲ್ಲಿ ಸಲ್ಲಿಸತಕ್ಕದ್ದು. ಅವಶ್ಯವಿರುವ ದಾಖಲೆಗಳನ್ನು ಪೂರ್ಣ ರೂಪದಲ್ಲಿ ಸಲ್ಲಿಸದೇ ಇರುವ ಟೆಂಡರುಗಳನ್ನು ಪಾವತಿಸಿರುವ ಇ.ಎಂ.ಡಿ.ಯನ್ನು ಮುಟ್ಟುಗೋಲು ಹಾಕಿ ತಿರಸ್ಕರಿಸಲಾಗುವುದು.
16. ತಾಂತ್ರಿಕ ಬಿಡ್/ಆರ್ಥಿಕ ಬಿಡ್ಡನ್ನು ತೆರೆಯುವ ದಿನಾಂಕದಂದು ಗುತ್ತಿಗೆದಾರರು/ಅವರ ಪ್ರತಿನಿಧಿಯವರು ಟೆಂಡರಿನ ಜತೆ ಒದಗಿಸಲಾದ ಎಲ್ಲಾ ಮೂಲ ದಾಖಲೆಗಳೊಂದಿಗೆ ಹಾಜರಾಗತಕ್ಕದ್ದು.

ಕೆಲಸದ ಕುರಿತಾದ ಯಾವುದೇ ಇತರ ವಿವರವನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ.

ಕಾರ್ಯನಿರ್ವಾಹಕ ಇಂಜಿನಿಯರ್,
ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ,
ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 770

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು**

**ಟೆಂಡರು ಪ್ರಕಟಣೆ**

**ಸಂಖ್ಯೆ:8:ಜಿಎನ್‌ಎಲ್:ಟಿಎನ್‌ಡಿ:2007-2008:ಜೆ಼ಇ-2, ದಿನಾಂಕ: 24ನೇ ನವೆಂಬರ್ 2007**

ನಬಾರ್ಡ್ ಆರ್.ಐ.ಡಿ.ಎಫ್- 12ರಡಿಯಲ್ಲಿ ಈ ಕೆಳಕಂಡ ಕಾಮಗಾರಿಗೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ವಿದ್ಯುತ್ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ

ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ:28.12.2007ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 27.12.2007ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 27.12.2007ರ ಸಂಜೆ:5.30ರ ತನಕ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ. ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| 1. | ಸುಳ್ಯ ತಾಲ್ಲೂಕಿನ ಬೆಳ್ಳಾರೆ-ಬೆಂಗಮಲೆ-ಪೈಚಾರು ರಸ್ತೆಯ ಕಿ.ಮೀ. 0.40 ರಲ್ಲಿ ಸೇತುವೆ ರಚನೆ. | 25.65 | ಒಂದನೇ ದರ್ಜೆ | 25,650.00 | ಆರು ತಿಂಗಳು | ದರವಾರು | 3300.00 |

**ಸೂಚನೆಗಳು:**

1) ಉದ್ದೇಶಿಸಿರುವ ಕಾಮಗಾರಿಯ ಶೇ. 30ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು.
2) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3) ಇ.ಎಂ.ಡಿ.ಯನ್ನು ಈ ಕೆಳ ಸಹಿ ಮಾಡಿದವರ ಹೆಸರಿಗೆ ಪ್ಲೆಜ್ಡ್ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್, ಬ್ಯಾಂಕ್ ಗ್ಯಾರಂಟಿ, ಕಾಲ್ ಡಿಪೋಸಿಟ್ ರಶೀದಿ, ಯಾವುದೇ ರಾಷ್ಟ್ರೀಕೃತ/ಶೆಡ್ಯೂಲ್ ಬ್ಯಾಂಕಿನ ಎಫ್.ಡಿ.ಆರ್./ಡಿಮಾಂಡ್ ಡ್ರಾಫ್ಟ್‌ದಲ್ಲಿ ಸಲ್ಲಿಸುವುದು.
4) ಗುತ್ತಿಗೆದಾರರು ಕೆಲಸವನ್ನು ನಿಗಧಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
5) ಗುತ್ತಿಗೆದಾರರು ಟೆಂಡರು ಬಗ್ಗೆ ಅರ್ಜಿ ಸಲ್ಲಿಸುವಾಗ ಈ ತರಹದ ಕೆಲಸವನ್ನು ಕೈಗೊಂಡವರಾಗಿದ್ದು ಅನುಭವ ಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
6) ಕಾಮಗಾರಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಹಾಗೂ ಇದನ್ನು ಸಕ್ಷಮ ಅಧಿಕಾರಿಯವರಿಂದ ಪರೀಕ್ಷೆ ಪಡೆದು ಫಲಿತಾಂಶವು ಐ.ಎಸ್.ಐ. ಗುಣವನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರನ್ನು ಸಲ್ಲಿಸುವಾಗ ಗಮನಿಸುವುದು.
7) ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್‌ಇಡಿ 2006:ಬೆಂಗಳೂರು:ದಿನಾಂಕ:18.1.2007ರಂತೆ ಕಡಿತಗೊಳಿಸಲಾಗುವುದು.

ಕಾರ್ಯನಿರ್ವಾಹಕ ಇಂಜಿನಿಯರ್,
ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ,
ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 774

## ಲೋಕೋಪಯೋಗಿ ಇಲಾಖೆ

## ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು

### ಟೆಂಡರು ಪ್ರಕಟಣೆ

**ಸಂಖ್ಯೆ:8:ಜಿಎನ್‌ಎಲ್:ಟಿಎನ್‌ಡಿ:2007-2008:ಜೆಇ-2, ದಿನಾಂಕ: 24ನೇ ನವೆಂಬರ್ 2007**

ವಿವಿಧ ಯೋಜನೆಯಡಿಯಲ್ಲಿ ಸೇರ್ಪಡೆಗೊಂಡ ಈ ಕೆಳಗಿನ ಕಾಮಗಾರಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಪೆರೆನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್‌ಮೆಂಟ್ ಆ್ಯಕ್ಟ್ 2000ರ ಪ್ರಕಾರ ದ್ವಿಲಕೋಟೆ ಪದ್ಧತಿಯಲ್ಲಿ ಮೊಹರಾದ ಐಟಂ ದರ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ (ಫೈನಾನ್ಸಿಯಲ್) ಬಿಡ್ಡನ್ನು ಒಳಗೊಂಡಿದೆ. ಬಿಡ್‌ಗಳನ್ನು ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್ ಎಂದು ಗುರುತು ಹಾಕಿದ ಎರಡು ಪ್ರತ್ಯೇಕ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಈ ಎರಡು ಲಕೋಟೆಗಳಿಗೆ ಮೊಹರು ಮಾಡಿ ಕೆಲಸದ ಶಿರೋನಾಮೆ ನಮೂದಿಸಿ ಇನ್ನೊಂದು ಮೊಹರಾದ ಲಕೋಟೆಯಲ್ಲಿಡಬೇಕು ಮತ್ತು ಬಿಡ್ಡುದಾರರ ಹೆಸರು ಹಾಗೂ ಪೂರ್ತಿ ಅಂಚೆ ವಿಳಾಸದೊಂದಿಗೆ ಕೆಳಸಹಿದಾರರಿಗೆ ಕಳುಹಿಸಬೇಕು. ಪೂರ್ತಿಗೊಳಿಸಿದ ಬಿಡ್ಡನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ-2ರ ಫಾರಂನಲ್ಲಿ ಪಿಡಬ್ಲ್ಯೂಜಿ-65 ಹಾಗೂ 66ರಲ್ಲಿ ಹಾಗೂ ಕರ್ನಾಟಕ ಟ್ರಾನ್ಸ್‌ಪೆರೆನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್‌ಮೆಂಟ್ ಆ್ಯಕ್ಟ್ 2000ರಲ್ಲಿ ನಿರೂಪಿತ ಶರ್ತಗೊಳಪಟ್ಟು ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಸ್ವೀಕರಿಸುವರು. ಈ ಕೆಳಗೆ ಸೂಚಿತ ದಿನಾಂಕದಂದು ತಾಂತ್ರಿಕ ಬಿಡ್ಡನ್ನು ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾಗಿರುವ ಬಿಡ್‌ದಾರರ ವಿತ್ತೀಯ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು. ಈ ಕೆಳಗೆ ನಮೂದಿಸಿದ ಯಾವುದಾದರೂ ದಿನಾಂಕಗಳಂದು ಸಾರ್ವತ್ರಿಕ ರಜಾವಾದಲ್ಲಿ ಮುಂದಿನ ದಿನಾಂಕವನ್ನು ಪ್ರತ್ಯೇಕವಾಗಿ ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ. ಠೇವಣಿ (ರೂ.ಲಕ್ಷಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| **I** | **5054 - ಇತರ ರಸ್ತೆ ರಚನೆ ವಿಶೇಷ ಘಟಕ ಯೋಜನೆ** | | | | | | |
| 1. | ಬಂಟ್ವಾಳ ತಾಲ್ಲೂಕಿನ ಪಾಣೆ ಮಂಗಳೂರು - ಪಾತೂರು ರಸ್ತೆ ಕಿಮೀ. 0.00 ರಿಂದ 3.00 ಕಿಮೀ. ವರೆಗೆ ಅಭಿವೃದ್ಧಿ | 75.00 | ಒಂದನೇ ದರ್ಜೆ | 75000.00 | 3 ತಿಂಗಳು | ದರವಾರು | 3300.00 |
| 2. | ಪುತ್ತೂರು ತಾಲ್ಲೂಕಿನ ಕಾವು - ಈಶ್ವರಮಂಗಲ ರಸ್ತೆ ಕಿಮೀ. 5.00 ರಿಂದ 8.00ರ ವರೆಗೆ ಅಗಲಗೊಳಿಸಿ ಅಭಿವೃದ್ಧಿ | 75.00 | ಒಂದನೇ ದರ್ಜೆ | 75000.00 | 3 ತಿಂಗಳು | ದರವಾರು | 3300.00 |
| **II** | **3054 - 12ನೇ ಹಣಕಾಸು ಯೋಜನೆ** | | | | | | |
| 1. | ಬಂಟ್ವಾಳ ತಾಲ್ಲೂಕು ಮಾರಿಪಳ್ಳ - ಕಲ್ಪನೆ ರಸ್ತೆಯ ಕಿಮೀ. 0.00 ರಿಂದ 3.00ರ ವರೆಗೆ ಅಗಲಗೊಳಿಸುವುದು. | 58.00 | ಒಂದನೇ ದರ್ಜೆ | 58000.00 | 3 ತಿಂಗಳು | ದರವಾರು | 3300.00 |

**ಸಾಮಾನ್ಯ ನಿಯಮಗಳು:-**

1. ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ:27.12.2007ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಷನ್‌ನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಕೆಲಸದ ಬಿಡ್ಡಿಂಗ್‌ನಲ್ಲಿ ಆಸಕ್ತಿಯುಳ್ಳ ಗುತ್ತಿಗೆದಾರರು ನಗದಾಗಿ ಅಥವಾ ಮಂಗಳೂರಿನಲ್ಲಿ ಪಾವತಿ ಆಗುವಂತೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರ ಹೆಸರಿಗೆ ಪಡೆದ ಡಿ.ಡಿ. ರೂಪದಲ್ಲಿ ಪಾವತಿಸಬೇಕಾದ ಟೆಂಡರ್ ಶೆಡ್ಯೂಲ್ ಮೌಲ್ಯದೊಂದಿಗೆ (ಇದನ್ನು ಹಿಂದಿರುಗಿಸುವುದಿಲ್ಲ) ಕೆಳ ಸಹಿದಾರರಿಗೆ ಅರ್ಜಿ ಸಲ್ಲಿಸಬೇಕು. ಅರ್ಜಿ ಜೊತೆ ಗುತ್ತಿಗೆದಾರರ ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿಯೊಂದಿಗೆ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್. / ಕಾಲ್ ಡಿಪೋಸಿಟ್ ರಶೀದಿ, ಬ್ಯಾಂಕ್ ಗ್ಯಾರಂಟಿ / ಡಿಮಾಂಡ್ ಡ್ರಾಫ್ಟ್ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿ.ಯನ್ನು ಕೆಳ ಸಹಿದಾರರ ಹೆಸರಿಗೆ ಪ್ಲೆಜ್ ಮಾಡಬೇಕು) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ದಿನಾಂಕದ ವಿವರಗಳು ಈ ಕೆಳಕಂಡಂತಿದೆ:-
   (ಅ) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 27.12.2007ರ ಕಛೇರಿ ಕೆಲಸದ ವೇಳೆಯಲ್ಲಿ
   (ಆ) ಖಾಲಿ ಟೆಂಡರು ಫಾರಂಗಳನ್ನು ಕೊಡುವ ದಿನಾಂಕ: 27.12.2007ರ ಕಛೇರಿ ಕೆಲಸದ ವೇಳೆಯಲ್ಲಿ
   (ಇ) ಟೆಂಡರು ಸಲ್ಲಿಸುವ ಕೊನೆಯ ದಿನಾಂಕ: 28.12.2007ರ ಅಪರಾಹ್ನ 4.00ರ ವರೆಗೆ
   (ಈ) ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ: 29.12.2007ರ ಪೂರ್ವಾಹ್ನ: 11.00 ಕ್ಕೆ ಅಥವಾ ಮುಂದೆ ತಿಳಿಸಲಾಗುವ ಸಮಯ ಮತ್ತು ದಿನಾಂಕದಂದು.
3. ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಎರಡು ವರ್ಷಗಳ ಕಾಲ ಯಾವುದೇ ದುರಸ್ತಿ ಕಾರ್ಯ ಬರಬಾರದು. ಈ ಮೇಲಿನಂತೆ ಪ್ರಕಟಿತ ಚಾಚು / ಚೈನೇಜುಗಳಲ್ಲಿ ಈ ಮೇಲಿನಂತೆ ದುರಸ್ತಿ ಅವಧಿಯಲ್ಲಿ (ಡಿಫೆಕ್ಟ್ ಲಯಾಬಿಲಿಟಿ ಅವಧಿ) ಯಾವುದಾದರೂ ದುರಸ್ತಿಬೇಕಾದರೆ ಗುತ್ತಿಗೆದಾರ / ವಾಣಿಜ್ಯ ಸಂಸ್ಥೆ ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪುನರ್ ನಿರ್ಮಿಸಿಕೊಡಬೇಕು.
4. ಪ್ರತಿ ಟೆಂಡರುದಾರರು ರಸ್ತೆ ಕೆಲಸಕ್ಕೆ ಈ ಕೆಳಗೆ ನೀಡಲಾದಂತೆ ಯಂತ್ರೋಪಕರಣ ಸ್ವಂತ ಅಥವಾ ಬಾಡಿಗೆಗೆ ಹೊಂದಿದ್ದು, ಅವುಗಳ ಮಾಲೀಕತ್ವದ ಪುರಾವೆ ಲಗ್ತೀಕರಿಸಬೇಕು. ಪುರಾವೆ ರಹಿತವಾಗಿ ಸಲ್ಲಿಸಿದ ಟೆಂಡರುಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1 | ಹಾಟ್ ಮಿಕ್ಸ್ ಪ್ಲಾಂಟ್ 40 / 60 ಟಿಪಿಹೆಚ್ ಯಾ ಹೆಚ್ಚಿನ ಸಾಮರ್ಥ್ಯ (ಎಂ.ಒ.ಆರ್.ಟಿ.ಹೆಚ್. ಮಾದರಿ ಪ್ರಕಾರ) | 1 | ಪರ್ಚೆಸ್ ಇನ್ ವೈಸ್ ಪ್ರತಿ / ಸೇಲ್ ಡೀಡ್ / ಬಾಡಿಗೆ ಪಡೆದ ವಿವರಗಳು (ಮಾಲಿಕನೊಂದಿಗೆ ಉಪಕರಣದ ಮಾಲಿಕತ್ವದ ಪುರಾವೆ ಸಹಿತ ಹಯರ್ ಅಗ್ರಿಮೆಂಟ್) |
| 2 | ಪೇವರ್ ಫಿನಿಷರ್ | 1 | :ಅದೇ: |
| 3 | ವೈಬ್ರೇಟರಿ ರೋಡ್ ರೋಲರ್ | 1 | ಪರ್ಚೆಸ್ ಇನ್ ವೈಸ್ ಪ್ರತಿ / ಸೇಲ್ ಡೀ ಡ್‌ನೊಂದಿಗೆ ಮೂಲ ಮಾರಾಟ ಮಾಡಿದವರ ಪರ್ಚೆಸ್ ಇನ್‌ವೈಸ್ ಪ್ರತಿ. |

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 4 | ಸ್ಟಾಟಿಕ್ ರೋಡ್ ರೋಲರ್ | 2 | :ಅದೇ: |
| 5 | ಮೆಕ್ಯಾನಿಕಲ್ ಸ್ಪ್ರೆಯರ್ | 2 | :ಅದೇ: |
| 6 | ಟಿಪ್ಪರ್ | 4 | ಆರ್.ಟಿ.ಓ. ನೀಡಿದ ನೋಂದಣಿ ಪ್ರಮಾಣ ಪತ್ರದ ಪ್ರತಿ / ಬಾಡಿಗೆ ಪಡೆದ ವಿವರಗಳು (ಮಾಲಿಕನೊಂದಿಗೆ ಟಿಪ್ಪರ್ ಮಾಲಿಕತ್ವದ ಪುರಾವೆ ಸಹಿತ ಹಯರ್ ಅಗ್ರಿಮೆಂಟ್) |
| 7 | ಏರ್ ಕಂಪ್ರೆಸರ್ | 2 | ಮಾರಾಟಗಾರರಿಂದ ಪರ್ಚೇಸ್ ಇನ್‌ವೈಸ್ / ಸೇಲ್‌ಡೀಡ್‌ನ ಪ್ರತಿ |

5. ಟೆಂಡರಿನಲ್ಲಿ ಭಾಗವಹಿಸಲಿಚ್ಚಿಸುವ ಗುತ್ತಿಗೆದಾರರು ಉದ್ದೇಶಿಸಿರುವ ಕಾಮಗಾರಿಯ ಶೇ. 30 ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
6. ಕಾಮಗಾರಿ ನಿರ್ವಹಿಸುವುದಕ್ಕಾಗಿ, ಬೇಕಾದ ಆರ್ಥಿಕ ಸಾಮರ್ಥ್ಯವನ್ನು ಹೊಂದಿರುವ ಬಗ್ಗೆ ಟೆಂಡರ್ ಮೊಬಲಗಿನ ಶೇ. 30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ) ಲೈನ್ ಆಫ್ ಕ್ರೆಡಿಟ್‌ನ್ನು ತಪ್ಪದೇ ನೀಡಬೇಕು.
7. ತಾಂತ್ರಿಕ ಬಿಡ್‌ಗಳ ಪುರಾವೆಯಾಗಿ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಗೆಜೆಟೆಡ್ ಅಧಿಕಾರಿಯವರಿಂದ ದೃಢೀಕರಿಸಿ ಸಲ್ಲಿಸಬೇಕು. ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಹಂತದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತದೆ.
8. ತಾಂತ್ರಿಕ ಬಿಡ್‌ನೊಂದಿಗೆ ಸಮಂಜಸವಾದ (ರಿಲೆವೆಂಡ್) ಪ್ರಮಾಣಪತ್ರಗಳು ಹಾಗೂ ವಿವರಗಳನ್ನು ಮಾತ್ರ ಲಗ್ತೀಕರಿಸಬೇಕು. ಕಂಪೆನಿ : ಏಜೆನ್ಸಿಗಳು / ವಾಣಿಜ್ಯ ಸಂಸ್ಥೆಗಳ : ಪ್ರೊಫೈಲ್ ವಿವರಗಳನ್ನು ಲಗ್ತೀಕರಿಸಬೇಕು.
9. ಜಂಟಿ ಸಹಭಾಗಿತ್ವದ ಟೆಂಡರುಗಳನ್ನು ಸ್ವೀಕರಿಸಲಾಗುವುದಿಲ್ಲ.
10. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
11. ಶರ್ತಬದ್ಧ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
12. ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಮುಗಿಸಬೇಕು. ತಪ್ಪಿದಲ್ಲಿ ನಿಯಮ ರೀತ್ಯಾ ದಂಡನಾ ಶುಲ್ಕ ತೆರಬೇಕಾಗುತ್ತದೆ.
13. ಗುತ್ತಿಗೆದಾರರು ಸಿಮೆಂಟ್, ಉಕ್ಕು ಡಾಂಬರು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳ ಸಂಗ್ರಹಕ್ಕೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S.) ಗುಣಮಟ್ಟಕ್ಕೆ ಸರಿಹೊಂದುವಂತಿರಬೇಕು. ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.
14. ಯಶಸ್ವೀ ಟೆಂಡರುದಾರರು ನಿರ್ವಹಿಸಿರುವ ಕಾಮಗಾರಿ ಮೊತ್ತದ ಶೇಕಡಾ 1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂಖ್ಯೆ:ಯುಎಲ್‌ಡಿ-3:ಡಿಎಲ್‌ಇಡಿ 2006:ಬೆಂಗಳೂರು:ದಿನಾಂಕ:18.1.2007ರಂತೆ ಪಾವತಿಸತಕ್ಕದ್ದು.
15. ತಾಂತ್ರಿಕ ಬಿಡ್/ಆರ್ಥಿಕ ಬಿಡ್ಡನ್ನು ತೆರೆಯುವ ದಿನಾಂಕದಂದು ಗುತ್ತಿಗೆದಾರರು/ಅವರ ಪ್ರತಿನಿಧಿಯವರು ಟೆಂಡರಿನ ಜತೆ ಒದಗಿಸಲಾದ ಎಲ್ಲಾ ಮೂಲ ದಾಖಲೆಗಳೊಂದಿಗೆ ಹಾಜರಾಗತಕ್ಕದ್ದು.

ಕೆಲಸದ ಕುರಿತಾದ ಯಾವುದೇ ಇತರ ವಿವರವನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ.

ಕಾರ್ಯನಿರ್ವಾಹಕ ಇಂಜಿನಿಯರ್,
ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ,
ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 775

**FORM - IV**

**(See Rule 12)**

**NOTICE**

It is hereby notified that the undersigned has changed his/her name from **BASAVARAJ PRABHAPPA HADAPAD** to **BASAVARAJ PRABHAPPA KALLUR**

P.D. 166

**BASAVARAJ PRABHAPPA HADAPAD**